

# ಸಪ್ತಗಿರಿ

, 1995

ಬೆಲೆ : ರೂ. 2/-

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ



ಅಮಲನಾದಿಪಿರಾನ್ ಅಡಿಯಾರ್‌ಕ್ಕೆನ್ನೈಯಾಳ್ಪಡುತ್ತ
ವಿಮಲನ್ ವಿಣ್ಣವರ್‌ಕೋನ್ ವಿರೈಯಾರ್
ಪೊಳಿಲ್ ವೇಂಗಡವನ್
ನಿಮಲನ್, ನಿಮ್ಮಲನ್, ನೀದಿವಾನವನ್
ನೀಳ್‌ಮದಿಳ್ ಅರಂಗತ್ತಮ್ಮಾನ್
ತಿರುಕ್ಕಮಲಪಾದಂ ವಂದು ಎನ್ ಕಣ್ಣಿನುಳ್ಳನ ವೊಕ್ಕಿನ್ರದೇ !

—ಶ್ರೀ ತಿರುಪ್ಪಾಣಿ ಆಳ್ವಾರರ ಅಮಲನಾದಿಪಿರಾನ್ ನಿಂದ.

(ಅಮಲನೂ, ಹಿರಿಯನೂ, ಆದ ಆ ನಿತ್ಯಸೂರಿಗಳ ಒಡೆಯ ನನ್ನನ್ನು ದಾಸನನ್ನಾಗಿ ಮಾಡಿಕೊಂಡ. ಪರಿಮಳಯುಕ್ತವಾದ ವೇಂಗಡದ ದೆಟ್ಟವಲ್ಲಿರುವವನೂ, ಎತ್ತರದ ಪ್ರಕಾರವಲ್ಲಿನ ಪರಮಪದವಾಸಿಯೂ ಆದ ಶ್ರೀರಂಗನಾಥನ ಪಾದಕಮಲವು ನನ್ನ ಕಣ್ಣಿನಲ್ಲಿ ನೆಲೆಸಿದೆ.)

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರಧಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.




ಗೌರವ ಸಂಪಾದಕರು :

ಎನ್. ರಮೇಶ್‌ಕುಮಾರ್ ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ :

ಎನ್.ಎಸ್. ರಾಮಮೂರ್ತಿ, ಎಂ. ಎ.

ಉಪಸಂಪಾದಕ :

ಬಿ. ಎನ್. ಶ್ರೀನಿವಾಸನ್ ಎಂ. ಎ.,

ಮುದ್ರಣ :

ಪಿ. ಮೋಹನ್ ರಾವ್

ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. --ಸಂ||


ಸಂಪುಟ -- 26 ಡಿಸೆಂಬರ್ 1995 ಸಂಚಿಕೆ --7


# ವಿಷಯಸೂಚಿ



ಮುಖ ಚಿತ್ರ : ಗೀತೋಪದೇಶಂ - ಚಿತ್ರ - ಡಾ|| ಕೆ. ಜಗದೀಶ್.

ಹಿಂಬದಿಯಲ್ಲಿ : ಆಂಡಾಳ್ - ಚಿತ್ರ - ಡಾ|| ಕೆ. ಜಗದೀಶ್.

ಒಳಗಡೆ : 1) ತಿರುಮಂಗೈ ಆಳ್ವಾರ್.
2) ತೊಂಡರಡಿಪ್ಪೊಡಿ ಆಳ್ವಾರ್.

ಮಧ್ಯವಿಸ್ತೃತಿ : ಸರ್ವಭೂಪಾಲವಾಹನ, ತಿರುಮಲೆ.
ಆಂಜನೇಯಸ್ವಾಮಿ - ತಿರುಪತಿ.

# ಸಂಪಾದಕೀಯ

ಕೆಡದ ವೈಕುಂಠವನೀವ ಕೊರೆಯಿರದ ವರವೀವ
ಬಲಿದ ಮಾಯೆಯಿಂ ರಕ್ಷಿಸುವ ವಿಷ್ಣುವೀತ

ವರ್ಷದಾದಿಯಲ್ಲಿ ದೈವದರ್ಶನ ಮಾಡಲು ಪ್ರತಿಯೊಬ್ಬರೂ ಬರುವುದು ಪರಂಪರೆ. ದೈವದರ್ಶನಕ್ಕಿಂತ ಮಿಗಿಲಾದ ಶುಭಸೂಚನೆ ಮತ್ತೊಂದಿಲ್ಲ. ಗತಕ್ಕಿಂತ ಭವಿತವ್ಯ ಚೆನ್ನಾಗಿರಬೇಕೆಂದು ಪ್ರತಿಯೊಬ್ಬರೂ ಬಯಸುತ್ತಾರೆ. ಆ ಬಯಕೆಯ ಈಡೇರಿಕೆಗಾಗಿ ದೈವದಲ್ಲಿ ಬೇಡುತ್ತಾರೆ.

ವೆಂಕಟಾದ್ರಿಗಿಂತ ಪವಿತ್ರವಾದ ಸ್ಥಳ ಬ್ರಹ್ಮಾಂಡದಲ್ಲೇ ಮತ್ತೊಂದಿಲ್ಲ. ಶ್ರೀ ವೆಂಕಟೇಶ್ವರಸ್ವಾಮಿಗೆ ಸಮನಾದ ದೇವರೂ ಭೂತ ಭವಿಷ್ಯತ್ ಕಾಲಗಳಲ್ಲಿ ಇಲ್ಲ. 108 ದಿವ್ಯ ವೈಷ್ಣವ ಕ್ಷೇತ್ರಗಳಲ್ಲಿ ಪರಮ ಪವಿತ್ರವಾದ ವೆಂಕಟಾದ್ರಿಯ ಮೇಲೆ ನೆಲೆಸಿದ ತಿಮ್ಮಪ್ಪ, ಪಾಪಗಳನ್ನು ಪರಿಸುವ ಪರಮಾತ್ಮ ಭಕ್ತರ ಪಾಲಿಗೆ ಪರಮಾಪ್ತ.

ಎಂತಲೇ ತಿರುಮಲೆಯ ವೆಂಕಪ್ಪನನ್ನು ದರ್ಶಿಸಲೆಂದು, ಹೊಸ ವರ್ಷವನ್ನು ಈ ಕೋನೇರಿರಾಯನ ಕರುಣಾಕಟಾಕ್ಷದಿಂದ ಆರಂಭಿಸಲೆಂದು ದೇಶದ ಯಾವತ್ತೂ ಜನ ಲಕ್ಷ ಸಂಖ್ಯೆಯಲ್ಲಿ ತಿರುಮಲೆಗೆ ಆಗಮಿ ಸುತ್ತಾರೆ.

ಈ ಬಾರಿ ವೈಕುಂಠ ಏಕಾದಶಿಯೂ ಜನವರಿ 1 ರಂದು ಬರುತ್ತಿದೆ. ಬಹು ವರ್ಷಗಳನಂತರ ವೈಕುಂಠ ಏಕಾದಶಿಯ ಪರ್ವದಿನ ಜನವರಿ 1 ರಂದು ಬರುತ್ತಿದೆ.

ಧನುರ್ಮಾಸದಲ್ಲಿನ ವೈಕುಂಠ ಏಕಾದಶಿಗೆ ವಿಶೇಷ ಪ್ರಾಮುಖ್ಯವಿದೆ. ಈ ಪರ್ವದಿನದಂದು ವೈಕುಂಠದ್ವಾರ ತೆಗೆಯುವರೆಂದು ಹಿಂದೂಗಳ ನಂಬಿಕೆ. ತಿರುಮಲೆಯಲ್ಲೂ ವೈಕುಂಠದ್ವಾರವನ್ನು ಅಂದು ತೆರೆಯುತ್ತಾರೆ. ಈ ವೈಕುಂಠದ್ವಾರದಲ್ಲಿ ಹೊಕ್ಕು ಬರುವ ಅವಕಾಶ ಭಕ್ತರಿಗೆ ಅಂದು ಮಾತ್ರವೇ ದೊರೆಯುವುದು.

ಅಷ್ಟೇ ಅಲ್ಲ; ಭಕ್ತರ ಕಣ್ಣಿಗೆ ಹಬ್ಬವಾಗುವಂತಹ ಹಲವಾರು ಧಾರ್ಮಿಕ ಕಾರ್ಯಕ್ರಮಗಳೂ ಅಂದು ತಿರುಮಲೆಯಲ್ಲಿ ನಡೆಯುತ್ತವೆ. ಪ್ರತ್ಯೇಕವಾಗಿ ಅಂಗರಂಗ ವೈಭವದ ಸ್ವಾಮಿಯ ತೆಪ್ಪೋತ್ಸವ ಅಂದು ನಡೆಯುತ್ತದೆ. ಸ್ವಾಮಿಯನ್ನು ಸುವರ್ಣ ರಥದಲ್ಲಿ ಊರ ಮೆರವಣಿಗೆ ಮಾಡುತ್ತಾರೆ. ಆ ಸಂಜೆ ಉಯ್ಯಾಲೆ ಸೇವೆ ಇರುತ್ತದೆ.

ಆ ದಿನದಂದು ಮಹಾವಿಷ್ಣುವನ್ನು ದರ್ಶಿಸುವುದಕ್ಕಿಂತ ಪುಣ್ಯಕಾರ್ಯವಿರದು. ಸರ್ವಪಾಪ ನಾಶವಾಗಿ ಜನ್ಮ ಸಾರ್ಥಕವಾಗುವ ಧನ್ಯಭಾವ ಉಂಟಾಗುತ್ತದೆ.

ಲಕ್ಷ ಲಕ್ಷ ಸಂಖ್ಯೆಯಲ್ಲಿ ಬರುವ ಭಕ್ತರಿಗೆ ಯಾವುದೇ ತೊಂದರೆಯಾಗದಂತೆ, ಪ್ರಶಾಂತವಾಗಿ, ವ್ಯವಸ್ಥಿತವಾಗಿ ಸ್ವಾಮಿದರ್ಶನ ಉಂಟಾಗುವಂತೆ ಮಾಡಲು ತಿ.ತಿ.ದೇ. ಎಲ್ಲ ಏರ್ಪಾಡುಗಳನ್ನೂ ಮಾಡುತ್ತಿದೆ.

ದೆಟ್ಟಕ್ಕೆ ತಿರುಪತಿಯಿಂದ 24 ಗಂಟೆಗಳೂ ಹೆಚ್ಚಿನ ಬಸ್‌ಗಳು ನಡೆಯುತ್ತವೆ. ಕಾಟೇಜು ಮೀಸಲಾತಿಯಿರದೆ ಮೊದಲು ಬಂದವರಿಗೆ ಮೊದಲು ಸೂತ್ರದ ಪ್ರಕಾರ ವಸತಿ ನೀಡಲಾಗುತ್ತದೆ. ವೈದ್ಯಕೀಯ, ಆಹಾರ ಸೌಲಭ್ಯಗಳು ಹಗಲು ರಾತ್ರಿ ಇರುತ್ತದೆ. ಸ್ವಾಮಿಯ ಕ್ಯಾಲೆಂಡರುಗಳು, ಸಾಹಿತ್ಯ, ಕ್ಯಾಸೆಟ್‌ಗಳನ್ನು ಮಾರಾಟ ಮಾಡಲು ಹಲವಾರು ಕೇಂದ್ರಗಳು ತೆರೆಯಲ್ಪಡುತ್ತವೆ. ವಾಹನ ಸಂಚಾರ ಕ್ರಮಬದ್ಧವಾಗುವಂತೆ ವ್ಯವಸ್ಥೆ ಮಾಡಲಾಗುತ್ತದೆ. ಯಾತ್ರಿಕ ಭಕ್ತರಿಗೆ ತುಸುವೂ ತೊಂದರೆಯಾಗದಂತೆ ಎಲ್ಲವೂ ಸುಸೂತ್ರವಾಗಿ ನಡೆಯುವ ರೀತಿಯಲ್ಲಿ ಎಲ್ಲ ಪ್ರಯತ್ನಗಳನ್ನೂ ಮಾಡಲಾಗುತ್ತಿದೆ.

ಏಳೇಳು ಲೋಕಗಳನಾಳುವ ಏಳುಮಲೆಯಪ್ಪನನ್ನು
ಏಳುವಾ ಹೊತ್ತಿನಲಿ ನೋಡಿ ಧನ್ಯರಾಗೋಣ

ಶ್ರೀಶಾನುಗ್ರಹಪ್ರಾಪ್ತಿರಸ್ತು

ಗೌರವ ಸಂಪಾದಕರು
**ಕಾರ್ಯನಿರ್ವಹಣಾಧಿಕಾರಿ,**
ತಿ. ತಿ. ದೇ., ತಿರುಪತಿ.

# ಗೀತೆಯಲ್ಲಿ ನಿಷ್ಕಾಮಕರ್ಮ

---ಕಂದಾಡೈ ಕೇಶವನ್.

ಪಂಚಮ ವೇದವೆಂದೇ ಪ್ರಸಿದ್ಧವಾಗಿರುವ ಹಾಭಾರತದಲ್ಲಿ ಭಗವದ್ಗೀತೆಯು ವೇದ ಉಪ ಷತ್ತಿನ ಸಾರತಮ ಉಪದೇಶಾಮೃತ. ಸ್ವತಃ ಕ್ವೇಶ್ವರನ ಮುಖಾರವಿಂದದಿಂದ ಬಂದ ಮೃತ ಬಿಂದುಗಳು. ಶ್ರೀಮದ್ಭಗವದ್ಗೀತಾ ಸ್ತವ್ರು--

ಸರ್ವೋಪನಿಷದೋ ಗಾವೋ
ದೋಗ್ಧಾ ಗೋಪಾಲನಂದನಃ
ಪಾರ್ಥೋ ವತ್ಸಃ ಸುಧೀರ್ಭೋಕ್ತಾ
ದುಗ್ಧಂ ಗೀತಾಮೃತಂ ಮಹತ್

ಎಂಬುವುದಾಗಿ ಹೇಳಿರುವ ಹಾಗೆ ಶ್ರೀಕೃಷ್ಣನು ಕ್ಷ ಪ್ರಿಯ ಭಕ್ತನಾದ ಅರ್ಜುನನಿಗೆ ಉಪದೇಶ ಾಡಿರುವುದರಿಂದ ಅಮೃತ ಸ್ವರೂಪವು, ಎಲ್ಲಾ ಪನಿಷತ್ತುಗಳೇ ಕಾಮಧೇನುಗಳು, ಅರ್ಜುನನೇ ುವು. ಶ್ರೀಕೃಷ್ಣನೇ ಗೋಪಾಲನು, ಹಾಲನ್ನು ುಡಿ ಅದನ್ನು ಪಾರ್ಥನಿಗೆ ಮೊದಲು ಕುಡಿಸಿ ತರು ಯ ಜ್ಞಾನಿಗಳೆಂಬ ಭೋಕ್ತೃಗಳಿಗೆ ಕುಡಿಸಿರು ನೆ. ಭಗವದ್ಗೀತೆಯ ಮೂರನೆಯ ಅಧ್ಯಾಯವು ಷ್ಕಾಮ ಕರ್ಮ ಯೋಗವನ್ನು ದೋಧಿಸುತ್ತದೆ. ನಿಗಳು ದೋಷಯುಕ್ತವಾದ ಕರ್ಮವನ್ನು ಪರಿ ಗಮಾಡಬೇಕೆಂದು ಹೇಳುತ್ತಾರೆ ಮತ್ತು ಅವರು ಜ್ಞ, ದಾನ, ತಪಸ್ಸೇ ಮುಂತಾದ ಕರ್ಮಗಳನ್ನು ಕಬಾರದೆಂದೂ ಹೇಳುತ್ತಾರೆ.

ಭಗವದ್ಗೀತೆಯ ೧೮ ನೇ ಅಧ್ಯಾಯದಲ್ಲಿ ಸ್ವಾಮಿ ಕೃಷ್ಣಭಗವಾನನು--

ಯಜ್ಞೋ ದಾನಂ ತಪಶ್ಚೈವ
ಪಾವನಾನಿ ಮನೀಷಿಣಾಂ
ಏತಾನ್ಯಪಿ ತು ಕರ್ಮಾಣಿ
ಸಂಗಂ ತ್ಯಕ್ತ್ವಾ ಫಲಾನಿ ಚ

ಎಂಬುವುದಾಗಿ ಹೇಳುವಾಗ ಯಜ್ಞವೂ ನವೂ, ತಪಸ್ಸೂ ಜ್ಞಾನಿಗಳಿಗೂ ಪವಿತ್ರವಾಗು ್ರ. ಇವುಗಳನ್ನು ಅವಶ್ಯವಾಗಿಅನುಷ್ಠಾನ ಮಾಡ ಕು. ಇದೇ ಕರ್ಮಗಳನ್ನು ಕರ್ಮಫಲ ಸ್ನೇಹ ಬ ದೋಷವನ್ನು ಬಿಟ್ಟು ನಿಷ್ಕಾಮ ಕರ್ಮ ವದೊಡನೆ ಕರ್ಮಫಲಗಳನ್ನು ಪರಮಾತ್ಮನಲ್ಲಿ ರ್ಪಿಸಿ ನಿತ್ಯ ಕರ್ಮಾನುಷ್ಠಾನ ಮಾಡದೇ ು ತಿಳಿಸಿರುತ್ತಾನೆ. ಇದು ಮೋಕ್ಷಸಾಧನ ಮೂ ತಿಳಿಸಿರುತ್ತಾನೆ. ಜ್ಞಾನಿಗಳಾದ ಜನಕಾದಿ ು ಕೂಡ ಭಗವದಾರಾಧನ ರೂಪವಾದ ಕರ್ಮ ೀಗವನ್ನು ಆಚರಿಸಿ ಂಗೆ ಮಾರ್ಗದರ್ಶನ ನೀಡಿದ್ದಾರೆ. ಬುದ್ಧಿ ಪೂರ್ವ ಗಿ ಕಾಮ ಕ್ರೋಧಗಳನ್ನು ಬಿಟ್ಟು ಪರಮಾತ್ಮನ



ಸ್ಮೃತಿ ಪೂರ್ವಕವಾಗಿ ಫಲಾಪೇಕ್ಷೆಯಿಲ್ಲದ ವಿಹಿತಕ ರ್ಮಗಳನ್ನು ಪ್ರತಿಯೊಬ್ಬ ಮುಮುಕ್ಷುವೂ ಮಾಡ ದೇಕು. ಮುಮುಕ್ಷುವು ಪರಮಾತ್ಮನ ಪ್ರೀತಿಯನ್ನೇ ಅಪೇಕ್ಷಿಸದೇಕು.

ನಾಹಂ ಕರ್ತಾ ಹರಿಃ ಕರ್ತಾ -ಎಂಬ ಭಾವ ದಿಂದ ವೇದೋಕ್ತವಾದ ವಿಹಿತ ಕರ್ಮಗಳನ್ನು ಅನುಷ್ಠಾನ ಮಾಡಿ ಪರಮಾತ್ಮನಿಗೆ ಆ ಕರ್ಮಫಲಗ ಳನ್ನು ಸಮರ್ಪಿಸುವುದೇ ನಿಷ್ಕಾಮ ಕರ್ಮಾನುಷ್ಠಾ ನವು. ನಿಷ್ಕಾಮಕರ್ಮದ ಬಗ್ಗೆ ಸ್ವಾಮಿಯು ೨ನೆಯ ಅಧ್ಯಾಯದಲ್ಲಿ ಹೇಳುವಾಗ--

ನೇ ಹಾಭಿ ಕ್ರಮ ನಾಶೋsಸ್ತಿ
ಪ್ರತ್ಯ ವಾಯೋ ನ ವಿದ್ಯತೇ
ಸ್ವಲ್ಪಮಪ್ಯಸ್ಯ ಧರ್ಮಸ್ಯ
ತ್ರಾಯತೇ ಮಹತೋ ಭಯಾತ್

ನಿಷ್ಕಾಮ ಕರ್ಮವು ಆರಂಭ ಮಾಡಿ ಅಪ್ಪರಲ್ಲೇ ಕರ್ಮವನ್ನು ಬಿಟ್ಟರೂ ಅದಕ್ಕೆ ಚ್ಯುತಿಯಿಲ್ಲ. ಪಾಪ ವಿಲ್ಲ, ಭಯವೂ ಇಲ್ಲ--

ಆರಂಭಮಾತ್ರಮಿಚ್ಛಾವಾ
ವಿಷ್ಣು ಧರ್ಮೇ ನ ನಿಷ್ಫಲಾ

ಎಂಬುವ ಪ್ರಮಾಣದಿಂದ, ಆ ಕರ್ಮವನ್ನು ನಿಷ್ಕಾಮಬುದ್ಧಿಯಿ ಮಾಡಿದರ ಫಲ ಅಂತಹದ್ದು, ಏಕೆಂದರೆ, ಕರ್ಮಯೋಗಾನುಷ್ಠಾನದಲ್ಲಿ ಅಭಿಕ್ರ ಮನಾಶ, ಪ್ರತ್ಯವಾಯವೆರಡೂ ಇಲ್ಲ. ನಿಷ್ಕಾಮ ನಾಗಿ ಭಗವಂತನ ಪ್ರೀತ್ಯರ್ಥವಾಗಿ ಕರ್ಮಮಾಡಲು ಉದ್ಯುಕ್ತನಾದಾಗಲೇ ಭಗವಾನನು ಆತನ ಭಕ್ತಿಗೆ ಪ್ರೀತನಾಗಿ ಭಕ್ತನ ಸೇವೆಯನ್ನು (ಕೈಂಕರ್ಯವನ್ನು) ಪೂರ್ಣವಾಗಿ ಸ್ವೀಕರಿಸುತ್ತಾನೆ. ಇದನ್ನೇ ಪಾಂಚ ರಾತ್ರ ಆಗಮಶಾಸ್ತ್ರವೂ ಹೀಗೆಂದು ಪ್ರತಿಪಾದಿಸು ತ್ತದೆ.



ಸಂಕಲ್ಪಾದೇವ ಭಗವಾನ್
ತತ್ತ್ವತೋ ಭಾವಿತಾತ್ಮನಾಂ
ವ್ರತಾಂತಮಖಿಲಂ ಕಾಲಂ
ಸೇ ಚಯಿತ್ವಮೃತೇನ ತು
ಜ್ಞಾತ್ವೈವ ಬಂಧಂ ಮರ್ತ್ಯೇನ
ಭವಿತವ್ಯಂ ಸದೈವಹಿ
ಪ್ರಾಪ್ತಯೇ ಸರ್ವ ಕರ್ಮಾನಾಂ
ಸಂಸಾರ ಭಯಭೀರುಣಾಂ
ಪ್ರವೃತ್ತಿ ಕಾಲಾ ದಾರಭ್ಯ
ಆತ್ಮಲಾಭಾವಸಾನಿಕಂ
ಯತ್ರಾ ವಕಾಶೋ ವಿಘ್ನಾನಾಂ
ವಿದ್ಯತೇ ನ ಕದಾಚನ

(ನಿಷ್ಕಾಮವಾದ ತನ್ನ ಭಕ್ತರು ತನ್ನನ್ನು ಉದ್ದೇಶ ಮಾಡಿ ವ್ರತಗಳನ್ನು ಅನುಷ್ಠಿಸಬೇಕೆಂದು ಸಂಕಲ್ಪವನ್ನು ಮಾಡಿದ ಮಾತ್ರವೇ ಪರಮಾತ್ಮನು ಅವನ್ನು ತಿಳಿದು ವ್ರತಸಮಾಪ್ತಿಯಾಗುವ ಕಾಲದಲ್ಲೂ ಅವರನ್ನು ತನ್ನ ಅಮೃತ ದೃಷ್ಟಿಯಿಂದ ಸಂತೋಷಗೊಳಿಸುತ್ತಾನೆ. ಪರಮಾತ್ಮನು ಎಲ್ಲಾ ವಿಘ್ನಗಳನ್ನು ನಿವಾರಿಸುತ್ತಾನೆ. ಕಾಮ್ಯ ಕರ್ಮಗಳು ಅನಿತ್ಯ ಫಲಗಳನ್ನು ಕೊಡುತ್ತವೆ. ಆದರೆ ನಿಷ್ಕಾಮ ಕರ್ಮವು ಮೋಕ್ಷವನ್ನು ನೀಡಬಲ್ಲದು. 'ಸಂಸಾರ ಸಾಗರದಿಂದ ವಿಮೋಚನೆ ನೀಡುತ್ತದೆ.) ಭಗವದ್ಗೀತೆಯ ೩ನೆಯ ಅಧ್ಯಾಯದಲ್ಲಿ ಶ್ರೀಕೃಷ್ಣ ಭಗವಾನನು ಕರ್ಮಯೋಗವನ್ನು ತ್ಯಜಿಸಿ ಜ್ಞಾನಯೋಗವನ್ನು ಮಾತ್ರ ಆಚರಿಸುವವರಿಗೆ ಜ್ಞಾನಯೋಗ ಸಿದ್ಧಿಯಾಗುವುದಿಲ್ಲವೆಂದು ಪ್ರತಿಪಾದಿಸುತ್ತಾನೆ. ಆದ್ದರಿಂದ ಕರ್ಮಯೋಗವು ಅತ್ಯವಶ್ಯಕವೆಂಬ ಭಾವವನ್ನು ಪ್ರಕಟಿಸುವಾಗ--

ನ ಕರ್ಮಣಾ ಮನಾ ರಂಭಾತ್
ನೈಷ್ಕರ್ಮ್ಯಂ ಪುರುಷೋಶ್ನುತೇ
ನ ಚ ಸನ್ಯಸನಾ ದೇವ
ಸಿದ್ಧಿಂ ಸಮಧಿ ಗಚ್ಛತಿ

ಕರ್ಮಯೋಗವನ್ನು ಆರಂಭಿಸಿದೆ ಇದ್ದರೂ, ಅದನ್ನು ಮಧ್ಯದಲ್ಲಿ ತ್ಯಜಿಸಿದರೂ ಜ್ಞಾನನಿಷ್ಠೆ ಉಂಟಾಗುವುದಿಲ್ಲ. ಆದ್ದರಿಂದ ಕರ್ಮಯೋಗವೇ ಶ್ರೇಷ್ಠ. ಕರ್ಮಯೋಗದಿಂದ ದೇವತೆಗಳೂ ಕೂಡ ಪ್ರಸನ್ನರಾಗುತ್ತಾರೆ. ಕರ್ಮಯೋಗಿ ಮಾಡುವ ಸಮಸ್ತ ಕರ್ಮಗಳಿಂದ ವಿಷ್ಣುವು ಪ್ರಸನ್ನನಾಗುತ್ತಾನೆ. ಶ್ರೀಕೃಷ್ಣನ ಸಂದೇಶದಲ್ಲಿ--

"ಕರ್ಮಬ್ರಹ್ಮೋದ್ಭವಂ ವಿದ್ಧಿ
ಬ್ರಹ್ಮಾಕ್ಷರ ಸಮುದ್ಭವಮ್
ತಸ್ಮಾತ್ ಸರ್ವಗತಂ ಬ್ರಹ್ಮ
ನಿತ್ಯಂ ಯಜ್ಞೇ ಪ್ರತಿಷ್ಠಿತಂ

ಎಂಬುವುದಾಗಿ ತಿಳಿಸಿದ್ದಾನೆ. ಲೋಕ ಸಂಗ್ರಹ ವಿಷಯವಾಗಿ ನೋಡಿದರೂ ಕರ್ಮಯೋಗವೇ ಶ್ರೇಷ್ಠ. ನಿಷ್ಕಾಮ ಭಗವದಾರಾಧನೆಯ ಮಹತ್ವವನ್ನು ಹೇಳುವಾಗ ಸ್ವಾಮಿ ೯ನೆಯ ಅಧ್ಯಾಯದಲ್ಲಿ--

ಪತ್ರಂ ಪುಷ್ಪಂ ಫಲಂ ತೋಯಂ
ಯೋ ಮೇ ಭಕ್ತ್ಯಾ ಪ್ರಯಚ್ಛತಿ
ತದಹಂ ಭಕ್ತ್ಯುಪಹೃತ
ಮಶ್ನಾಮಿ ಪ್ರಯತಾತ್ಮನಃ

ಎಲೈ ಅರ್ಜುನನೇ ತುಲಸೀ ಮುಂತಾದ ಪತ್ರಗಳನ್ನಾಗಲಿ, ಮಲ್ಲಿಗೆ ಮುಂತಾದ ಪುಷ್ಪಗಳಾಗಲಿ, ನಾರೀಕೇಳಾದಿ ಫಲಗಳನ್ನಾಗಲಿ ಅಥವಾ ಪರಿಶುದ್ಧವಾದ ಜಲವನ್ನಾಗಲಿ ಯಾವ ಭಕ್ತನು ನನಗೆ ಸಮರ್ಪಿಸುತ್ತಾನೋ ಅಂತಹ ಭಕ್ತನು ಕೊಡುವ ಪತ್ರಾದಿ ಸರ್ವವನ್ನೂ ನಾನು ಸ್ವೀಕರಿಸುತ್ತೇನೆ ಎಂಬುವುದಾಗಿ ಹೇಳಿದ್ದಾನೆ. ಸ್ವಾಮಿ ಭಕ್ತಿಯಿಂದ ಸಮರ್ಪಿಸುವ ಎಲ್ಲವನ್ನೂ ಸ್ವೀಕರಿಸಬಲ್ಲ. ಭಕ್ತಿ ರಹಿತ ಆರಾಧನೆ - ಭಕ್ತಿಗೆ ಅವನು ಮಣಿಯಲಾರ. ದುರ್ಯೋಧನನ ಅತಿಥ್ಯವನ್ನು ಸ್ವಾಮಿ ತಿರಸ್ಕರಿಸಿ ಭಕ್ತನಾದ ವಿದುರನ ಮನೆಯಲ್ಲಿ ಆತಿಥ್ಯ ಸ್ವೀಕರಿಸಿದನು.

ನಿಷ್ಕಾಮಕರ್ಮದ ಮಹಿಮೆ ತಿಳಿಸುವಾಗ ಕರ್ಮವನ್ನು ಸ್ವರ್ಗಸುಖಾಪೇಕ್ಷೆಯಿಂದಲಾಗಲಿ, ವಿಷಯಕಾಂಕ್ಷೆಯಿಂದಾಗಲಿ ಆಚರಿಸಬಾರದು. ಮನಸ್ಸಿನಲ್ಲಿ ವಿಷಯ ಚಿಂತನೆಯನ್ನೂ ಕೂಡ ಮಾಡಬಾರದು. ಚಿತ್ತೈಕಾಗ್ರತೆಯಿಂದ ಕರ್ಮವನ್ನು ಆಚರಿಸಬೇಕೆಂಬುದೇ ಶ್ರೀಕೃಷ್ಣನ ಅಭಿಪ್ರಾಯ--

ಕರ್ಮೇಂದ್ರಿಯಾನಿ ಸಂಯಮ್ಯ
ಯ ಆಸ್ತೇ ಮನಸಾ ಸ್ಮರ್ರ
ಇಂದ್ರಿಯಾರ್ಥಾನ್ ವಿಮೂಢಾತ್ಮಾ
ನಿಯಮ್ಯಾರಭತೇಽರ್ಜುನ
ಕರ್ಮೇಂದ್ರಿಯೈಃ ಕರ್ಮಯೋಗ
ಮಸಕ್ತಃ ಸವಿಶಿಷ್ಯತೇ

ಜ್ಞಾನೇಂದ್ರಿಯಗಳನ್ನು ನಿಗ್ರಹಮಾಡಿ ರೂಪಾದಿ ವಿಷಯಗಳನ್ನು ಮನಸ್ಸಿನಲ್ಲಿ ಸ್ಮರಿಸುವವನು ಕಪಟಿ ಹಾಗೂ ಡಾಂಭಿಕನು. ಯಾರು ಇಂದ್ರಿಯಗಳನ್ನು ಮನಸ್ಸಿನಿಂದ ನಿಗ್ರಹಿಸಿ ಕರ್ಮೇಂದ್ರಿಯದಿಂದ ನಿಷ್ಕಾಮ ಕರ್ಮವನ್ನು ಮಾಡುವನೋ ಆತನು ಶ್ರೇಷ್ಠನು. ಶ್ರೀಕೃಷ್ಣನು ಮೂರನೆಯ ಅಧ್ಯಾಯದಲ್ಲಿ ಕರ್ಮಾನುಸಾರ ಪ್ರಾಪ್ತವಾದ ಶರೀರದ ಗುಣಗಳಿಗನುಸಾರವಾಗಿ ಕರ್ಮಗಳು ಪ್ರಕೃತಿಯಿಂದ ನಡೆಯುತ್ತವೆ ಎಂಬುವುದಾಗಿ ಹೇಳಿ--

ಮಯಿ ಸರ್ವಾಣಿ ಕರ್ಮಾಣಿ
ಸನ್ನಸ್ಯ ಅಧ್ಯಾತ್ಮಚೇತಸಾ
ನಿರಾಶೀ ನಿರ್ಮಮೋ ಭೂತ್ವಾ
ಯುಧ್ಯಸ್ವ ವಿಗತಜ್ವರಃ

ಸರ್ವ ನಿಯಾಮಕನಾದ ನನ್ನಲ್ಲಿ ಸಮಸ್ತ ಕರ್ಮ ಳನ್ನು ಸರ್ವೇಶ್ವರನೇ ಈ ಸಮಸ್ತ ಕರ್ಮಗಳನ್ನು ಡೆಸುವವನು ಎಂಬುವ ಮನಸ್ಸಿನಿಂದ ಆ ಕರ್ಮ ಳನ್ನು ನನಗೆ ಸಮರ್ಪಿಸಿ ಫಲದಲ್ಲಿ ಆಸೆಯಿಲ್ಲದ ನಾಗಿ ನಾನು ಮಾಡುವೆನೆಂಬ ಮಮತೆಯನ್ನು ೊರೆದು (ನಿರಾಶೀಃ - ನಿರ್ಮಮಃ) ಪರಿತಾಪ ೂನ್ಯನಾಗಿ ಅಂದರೆ ಕರ್ಮದ ಸಂಗವನ್ನು ಬಿಟ್ಟು ದರ ಫಲವನ್ನು ತ್ಯಜಿಸಿ, ಎಲ್ಲವನ್ನೂ ಪರಮ ುರುಷನೇ ನಡೆಸಿದನು ಎಂಬುವ ಅನುಸಂಧಾನ ಂದ ಮಾಡುವ ನಿಷ್ಕಾಮಕರ್ಮವೇ ಸಮರ್ಪಣಾ ಾವವೇ ಶ್ರೇಷ್ಠವು. ವಿಧ್ಯುಕ್ತವಾಗಿರುವ ನಿಷ್ಕಾಮ ರ್ಮವು ಪರಮಾತ್ಮನಿಗೆ ಪ್ರೀತಿ. ನಿಷಿದ್ಧ ಕರ್ಮಗ ನ್ನು ಸ್ವಾಮಿ ಸ್ವೀಕರಿಸಲಾರ. ಶ್ರೀಕೃಷ್ಣನು ೧೮ನೆಯ ಧ್ಯಾಯದಲ್ಲಿ ಅಂತಹ ಸಾತ್ವಿಕ ಕರ್ಮಗಳ ಬಗ್ಗೆ ೇಳುವಾಗ--

ನಿಯತಂ ಸಂಗರಹಿತಮ್
ಅರಾಗ ದ್ವೇಷತಃ ಕೃತಂ
ಅಫಲ ಪ್ರಾಪ್ಸುನಾ ಕರ್ಮ
ಯತ್ತತ್ ಸಾತ್ವಿಕ ಮುಚ್ಯತೇ

ವರ್ಣಾಶ್ರಮ ಉಚಿತವಾದ ಹಾಗೂ ವಿಧ್ಯುಕ್ತ ಾದ ಫಲ ಸ್ನೇಹಿತರಹಿತವಾಗಿ ರಾಗದ್ವೇಷಗ ಲ್ಲದೆ ಅಹಂಕಾರ ಮಮಕಾರಗಳ ರಹಿತವಾಗಿ ಾಡಲ್ಪಟ್ಟ ಕರ್ಮವು ಸಾತ್ವಿಕವು. ಇದೇ ಪರಮ ೇಷ್ಠವಾದುದು.

ಸಕಲ ಕರ್ಮಗಳನ್ನೂ ಅದರ ಫಲವನ್ನೂ ಪರ ಾತ್ಮನಲ್ಲಿ ಅರ್ಪಿಸಬೇಕು ಎಂಬುವ ಭಾವವನ್ನೇ ್ವಾಮಿ ಭಗವದ್ಗೀತೆಯಲ್ಲಿ ಹಲವು ಕಡೆ ಒತ್ತಿ ಹೇಳಿ ್ದಾನೆ. "ಶುಭಾಶುಭ ಪರಿತ್ಯಾಗೀ", "ಸರ್ವಾರಂಭ ರಿತ್ಯಾಗಿ" ಹಾಗೂ "ಸರ್ವ ಧರ್ಮಾ ಪರಿತ್ಯಜ್ಯ" ಂಬುವ ಅನೇಕ ಶ್ಲೋಕಗಳಲ್ಲಿ ಸರ್ವ ಕರ್ಮಗ ನ್ನೂ ಭಗವಂತನ ಪಾದದಲ್ಲಿ ಅರ್ಪಿಸಿ ನಿಶ್ಚಲ ಚಿತ್ತ ಾಗಿರಬೇಕೆಂದು ಎಂಬುವ ಅವನ ಉಪದೇಶಾ ೃತವು. ಭಗವದ್ಗೀತೆಯ ಮೂರನೆಯ ಅಧ್ಯಾ ಯದಲ್ಲಿ ಕರ್ಮಯೋಗದ ಶ್ರೇಷ್ಠತೆಯನ್ನು ಸ್ವಾಮಿ ೦ನೇ ಶ್ಲೋಕದಲ್ಲಿ ತಿಳಿಸಿ, ಮುಮುಕ್ಷುವಾದವನು ನುಷ್ಠಿಸಬೇಕಾದ ಕರ್ಮ ಎಂತಹದ್ದು, ಕರ್ಮದಲ್ಲಿ ಂತರ್ಗತವಾದ ಆತ್ಮಯಾಥಾತ್ಮ ಜ್ಞಾನವೆಂಥದು ಂಬುವ ವಿಷಯದಲ್ಲಿ ವಿದ್ವಾಂಸರಿಗೂ ಕೂಡ ಮೋಹವುಂಟಾಗುತ್ತೆ ಎಂಬುವುದಾಗಿ ಹೇಳಿ ಯಾವು ದನ್ನು ತಿಳಿದು ಅನುಷ್ಠಿಸುವುದರಿಂದ ಸಂಸಾರ ಬಂಧನದಿಂದ ಮುಕ್ತನಾಗಬಹುದು ಎಂಬುವು ದಾಗಿ ತಿಳಿಸುವಾಗ ಜ್ಞಾನ ವಿಶಿಷ್ಟವಾದ ಕರ್ಮ ವನ್ನೂ ಕರ್ಮ ವಿಶಿಷ್ಟವಾದ ಜ್ಞಾನವನ್ನೂ ತಿಳಿ ಯುವವನೇ ಸಕಲ ಶಾಸ್ತ್ರಾರ್ಥಗಳನ್ನು ತಿಳಿದ ವನು. ಮೋಕ್ಷಕ್ಕೆ ಅರ್ಹನೆಂಬುವುದಾಗಿ ಸ್ವಾಮಿ ತಿಳಿ ಸುತ್ತಾನೆ. ಮುಮುಕ್ಷುವು ಮಾಡುವ ಸಮಸ್ತ ಕರ್ಮ ಗಳು ಪರಬ್ರಹ್ಮಾತ್ಮಕವೇ ಎಂಬುವುದಾಗಿ ಪ್ರತಿಪಾದಿ ಸುತ್ತಾನೆ.

ಮೂವತ್ತೈದನೆಯ ಶ್ಲೋಕ--

"ಶ್ರೇಯಾನ್ ಸ್ವಧರ್ಮೋ ವಿಗುಣಃ
ಪರಧರ್ಮಾತ್ ಸ್ವನುಷ್ಠಿತಾತ್
ಸ್ವಧರ್ಮೇ ನಿಧನಂ ಶ್ರೇಯಃ
ಪರಧರ್ಮೋ ಭಯಾವಹಃ

ಕರ್ಮಯೋಗವು ಸ್ವಧರ್ಮವಾಗಿ ಉಪಾದೇಯ ವಾಗಿದ್ದು ಪ್ರಶಸ್ತ, ಜ್ಞಾನಯೋಗ ಮಾತ್ರ ಪರಧರ್ಮ ವಾಗಿರುವುದರಿಂದ ಅನುಪಾದೇಯ. ಆದ್ದರಿಂದ ಜ್ಞಾನಯೋಗಕ್ಕಿಂತ ಕರ್ಮಯೋಗ ಮಾಡಿ ಸಾಯು ವುದೇ ಲೇಸು. ಕರ್ಮಯೋಗದ ಮಧ್ಯದಲ್ಲಿ ಮರ ಣಹೊಂದಿದರೂ ಅದು ಶ್ರೇಷ್ಠವೇ. ಇನ್ನು ಮುಂದೆ ಪರಮಾತ್ಮನು ಕರ್ಮತ್ಯಾಗಮಾಡಿದ ಜ್ಞಾನಯೋ ಗವನ್ನು ಅನುಷ್ಠಿಸುವವನಿಗೆ ವಿಘ್ನವೂ ಉಂಟು. ಅವನು ಕಾಮಕ್ರೋಧಗಳಿಗೆ ತುತ್ತಾಗಬಲ್ಲ, ಆದರೆ ಕರ್ಮಯೋಗಿಗೆ ಇವುಗಳ ಭಯವಿಲ್ಲ ಎಲ್ಲಕ್ಕಿಂತ ಮಿಗಿಲಾಗಿ ಕಾಮವೆಂಬುವುದು ದೊಡ್ಡ ಶತ್ರುವು. ಮನಸ್ಸು - ಇಂದ್ರಿಯಗಳು ಕಾಮಕ್ಕೆ ಸಹಕಾರಿ ಶತ್ರು ಗಳು.

ಇಂದ್ರಿಯಾಣಿ ಪರಾಣ್ಯಾಹುಃ
ಇಂದ್ರಿಯೇಭ್ಯಃ ಪರಂ ಮನಃ
ಮನಸಸ್ತು ಪರಾಬುದ್ಧಿಃ
ಯೋ ಬುದ್ಧೇಃ ಪರತಸ್ತು ಸಃ

ಜ್ಞಾನಯೋಗಾಧಿಕಾರಿಗೆ ಕಾಮವು ಪ್ರಬಲ ಶತ್ರು. ಈ ಶತ್ರುವಿಗೆ ಇಂದ್ರಿಯಗಳು ಮನಸ್ಸು ಬುದ್ಧಿಯೂ ಸಹಕಾರಿಗಳು, ಆದ್ದರಿಂದ ಇಂದ್ರಿಯಗಳನ್ನು ಕರ್ಮ ಯೋಗಾನುಷ್ಠಾನದ ಮೂಲಕ ನಿಯಮಿಸಿ ಅದನ್ನು ಗೆಲ್ಲು ಹಾಗೂ ಅವುಗಳನ್ನು ನಿನ್ನ ವಶದಲ್ಲಿಟ್ಟುಕೋ ತನ್ಮೂಲಕ ನಿನ್ನ ಮನಸ್ಸನ್ನು ಅದರ ಸಹಾಯದಿಂದ ಬುದ್ಧಿಯನ್ನೂ ಜಯಿಸು. ಇದರ ಪರಿಣಾಮ ದಿಂದ ಪ್ರಬಲಶತ್ರುವಾದ ಕಾಮವೆ ದುರ್ಬಲವಾಗಿ ನೀನು ಅವುಗಳನ್ನು ಜಯಿಸುವಂತೆ ಆಗುತ್ತೆ. ಆದ್ದ ರಿಂದ ಕರ್ಮಯೋಗವನ್ನು ಆಚರಿಸು ಎಂಬುವು ದಾಗಿ ಸ್ವಾಮಿ ತಿಳಿಸುತ್ತಾನೆ. ಇದನ್ನೇ ಯಾಮುನ ಮುನಿಗಳು ತಮ್ಮ ಶ್ರೀಮದ್ಗೀತಾರ್ಥ ಸಂಗ್ರಹದಲ್ಲಿ ಸಂಕ್ಷಿಪ್ತವಾಗಿ ಹೇಳುವಾಗ--

"ಅಸಕ್ತ್ಯಾ ಲೋಕ ರಕ್ಷಾಯೈ
ಗುಣಾಷ್ವಾರೋಪ್ಯ ಕರ್ತೃತಾಮ್
ಸರ್ವೇಶ್ವರೇವಾ ನ್ಯಸ್ಯೋಕ್ತಾ
ತೃತೀಯೇ ಕರ್ಮಕಾರ್ಯತಾ

ಪರಮ ಪುರುಷಾರಾಧನವಾಗಿ ಬೇರೆ ಫಲ ಸಂಗ ವಿಲ್ಲದೇ ತಾನು ಮಾಡುವೆನು ಎಂಬ ದುರಭಿಮಾನ ವಿಲ್ಲದೇ ಸರ್ವೇಶ್ವರನೇ ಎಲ್ಲಾ ಕರ್ಮಗಳ ಅಧಿಪತಿ, ಆ ಕರ್ಮಗಳನ್ನು ಆಚರಿಸುವುದರಿಂದ ಅವನು ಪ್ರೀತ ನಾಗುತ್ತಾನೆ ಎಂಬುವ ಭಾವನೆಯಿಂದ ಲೋಕ ರಕ್ಷಣಾರ್ಥವಾಗಿ ಮಾಡುವ ನಿಷ್ಕಾಮ ಕರ್ಮವೇ ಶ್ರೇಷ್ಠವು. ಇದನ್ನೇ ರಾಮಾನುಜರು ತಮ್ಮ ಗೀತಾ ಭಾಷ್ಯದಲ್ಲಿ--

ಅತೋ ಮಚ್ಛರೀರತಯಾ
ಮತ್ ಪ್ರವರ್ತ್ಯಾತ್ಮಸ್ವರೂಪಾನು
ಸಂಧಾನೇನ ಸರ್ವಾಣಿ ಕರ್ಮಾಣಿ ಮಯ್ಯೇವ
ಕ್ರಿಯಮಾಣಾ ನೀತಿ ಪರಮ
ಪುರುಷೇ ಸನ್ನಸ್ಯ ತಾನಿ ಚ ಕೇವಲಂ
ಮದಾರಾಧನಾ ನೀತಿ ಕೃತ್ವಾ
ತತ್ ಫಲೇ ನಿರಾಶೀಃ
ತತ ಏವ ತತ್ರ ಕರ್ಮಣಿ
ಮಮತಾ ರಹಿತೋ ಭೂತ್ವಾ
ವಿಗತಜ್ವರೋ ಕರ್ಮಾಧಿಕಂ ಕುರುಷ್ವ
(ಕರ್ಮ ಯೋಗಮೇವ ಕುರುಷ್ವ)

ಎಂಬುವುದಾಗಿ ತಿಳಿಸಿದ್ದಾರೆ. ಈ ಕರ್ಮಯೋ ಗದ ಪ್ರಧಾನ ಅರ್ಥವು ಚೇತನನು ಭಗವಂತನಿಗೆ ಶರೀರವಾಗಿ ಆತನು ಅವನಿಗೆ ಆತ್ಮನಾಗಿರುವುದ ರಿಂದ ಅವನು ಅವನಿಗೆ ದಾಸನು ಭಗವಂತ ನಿಯಾ ಮಕನು. ಆದ್ದರಿಂದ ನಾವು ಮಾಡುವ ಎಲ್ಲಾ ಕರ್ಮ ಗಳು ಭಗವತ್ ಪ್ರೀತ್ಯರ್ಥಕ್ಕಾಗಿ, ನಮಗಾಗಿ ಅಲ್ಲ ಎಂಬುವ ಭಾವನೆ ಮುಖ್ಯ. ಅದರಂತೆ ಆಚರಣೆ ಅವಶ್ಯಕ. ಪತಿಂ ವಿಶ್ವಸ್ಯ - ಪತಿಂ ಪತೀನಾಂ - ಇತ್ಯಾದಿ ಶ್ರುತಿ ಸಿದ್ಧಾಂತಗಳಿಂದ ಈಶ್ವರನು ಸರ್ವ ನಿಯಾಮಕನು.

ಪರಮಂ ಚ ದೈವತಂ
ಪತಿಂ ಪತೀನಾಂ ಪರಮಂ ಪರಸ್ತಾತ್
ವಿದಾಮ ದೇವಂ ಭುವನೇಶ ಮೀಡ್ಯಮ್

ಎಂಬುವುದರಿಂದ ಆ ಸರ್ವೇಶ್ವರನು ನಮಗೆಲ್ಲಾ ಪತಿಯು. ಸರ್ವಶೇಷಿತ್ವವೂ ಆ ಈಶ್ವರನಿಗೇ ಮಾತ್ರ ಮೀಸಲು.

# ಶ್ರೀಕೃಷ್ಣಮಂಗಳಂ

---ಎಂ. ಆರ್. ನರಸಿಂಹನ್.



ಮಂಗಳಂ ಯಾದವೇಂದ್ರಾಯ ಕಾರುಣ್ಯಾಮೃತಸಿಂಧವೇ
ವಸುದೇವ ತನೂಜಾಯ ಬಾಲಕೃಷ್ಣಾಯ ಮಂಗಳಮ್ ||೧||

ಶ್ರುತಿಸ್ಮೃತಿ ಸುಗೀತಾಯ ಶ್ಯಾಮಸುಂದರ ಮೂರ್ತಯೇ
ಗೋಪೀ ಮೋಹನರೂಪಾಯ ಪುಣ್ಯಶ್ಲೋಕಾಯ ಮಂಗಳಮ್ ||೨||

ಮಧುರಾ ನಗರೀಪುಣ್ಯೇ ದೇವಕೀ ಗರ್ಭ ಭಾಸಿನೇ
ಯಶೋದಾ ನಂದ ಗೋಪಾಭ್ಯಾಂ ವರ್ಧಿತಾಯಾಸ್ತು ಮಂಗಳಮ್ ||೩||

ಪೂತನಾ ಬಕ ಕೇಶ್ಯಾದಿ ನಾನಾ ಸುರ ವಿಘಾತಿನೇ
ನವನೀತ ದಧಿಕ್ಷೀರ ಚೋರಾಯಾಸ್ತು ಸುಮಂಗಳಮ್ ||೪||

ಕಾಳೀಯಮರ್ದನಂ ಕೃತ್ವಾ ಧೃತ್ವಾಗೋವರ್ಧನಂ ಮಹತ್
ಸಂತ್ರಾತಗೋಪವರ್ಗಾಯ ಗೋಪಾಲಾಯಾಸ್ತು ಮಂಗಳಮ್ ||೫||

ರಾಸಕ್ರೀಡಾ ಜಲಕ್ರೀಡಾ ರಸ್ಯೈರ್ಗೋಪೀ ಮನೋಮುಷೇ
ವೇಣುನಾದ ವಿನೋದಾಯ ದಿವ್ಯರೂಪಾಯ ಮಂಗಳಮ್ ||೬||

ಕಂಸಾದ್ಯ ಸುರ ಸಂಹಾರಾತ್ ಭೂಭಾರಹರಣಾದಪಿ
ಮುನಿ ವೃಂದಾಭಿವಂದ್ಯಾಯ ಭಕ್ತತ್ರಾಣಾಯ ಮಂಗಳಮ್ ||೭||

ರುಕ್ಮಿಣೀ ಸತ್ಯಭಾಮಾದಿ ಹೃದಯಾಂಬುಜ ವಾಸಿನೇ
ಸಾಕ್ಷಾನ್ಮನ್ಮಥ ರೂಪಾಯ ಸತ್ಯಸಂಧಾಯ ಮಂಗಳಮ್ ||೮||

ಪಾಂಡವ ಪ್ರಿಯಮಿತ್ರಾಯ ಕೌರವಾಣಾಂ ವಿನಾಶಿನೇ
ದ್ರೌಪದೀಮಾನ ರಕ್ಷಾಯ ಶಿಷ್ಟ ಪಕ್ಷಾಯ ಮಂಗಳಮ್ ||೯||

ಗೀತಾಮೃತ ಪ್ರದಾನಾಯ ವಿಶ್ವರೂಪ ಪ್ರದರ್ಶಿನೇ
ಯೋಗೇಶ್ವರಾಯ ಭೀಷ್ಮಾದಿ ಭಕ್ತ ವಂದ್ಯಾಯ ಮಂಗಳಮ್ ||೧೦||

ದ್ವಾರಕಾನಗರೀಶಾಯ ಪರೀಕ್ಷಿತ್ ಪ್ರಾಣದಾಯಿನೇ
ತುಭ್ಯಂ ಪಾಂಡವದೂತಾಯ ಪಾರ್ಥಸೂತಾಯ ಮಂಗಳಮ್ ||೧೧||

ಸಾಧುಲೋಕ ಪರಿತ್ರಾಣ ದುಷ್ಕೃತಾದಿ ವಿನಾಶನ
ಧರ್ಮ ಸಂಸ್ಥಾಪನಾಚಾರ್ಯ ತುಭ್ಯಂ ಭೂಯೋಸ್ತು ಮಂಗಳಮ್ ||೧೨||

ಮಂಗಳಾಶಾಸನ ಪರೈರ್ಮದಾಚಾರ್ಯ ಪುರೋಗಮೈಃ
ಸರ್ವೈಶ್ಚ ಪೂರ್ವೈರಾಚಾರ್ಯೈಃ ಸತ್ಕೃತಾಯಾಸ್ತು ಮಂಗಳಮ್



# ಶ್ರೀಮದ್ಭಗವದ್ಗೀತೆ

---ಸಾಲೀಮಠ ದೊಡ್ಡಯ್ಯಶಾಸ್ತ್ರಿ.

"ಯದಾಯದಾಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ
ತದಾತ್ಮಾಂ ಸೃಜಾಮ್ಯಹಂ
ಪರಿತ್ರಾಣಾಯ ಸಾಧೂನಾಂ
ವಿನಾಶಾಯ ಚ ದುಷ್ಕೃತಾಂ
ಧರ್ಮ ಸಂಸ್ಥಾಪನಾರ್ಥಾಯ
ಸಂಭವಾಮಿ ಯುಗೇ ಯುಗೇ

ಯಾವ ಕಾಲದಲ್ಲಿ ಧರ್ಮಕ್ಕೆಚ್ಯುತಿ ಬರುವುದೋ ಅಧರ್ಮ ಉತ್ಕರ್ಷವಾಗುವುದೋ ಸಾಧು ಸಂತರ ಸಜ್ಜನರ ರಕ್ಷಣಾರ್ಥವಾಗಿ ದುಷ್ಟರ ನಿಗ್ರಹಕ್ಕಾಗಿ ಧರ್ಮಸ್ಥಾಪನೆಗಾಗಿ ಯುಗಯುಗದಲ್ಲಿ ನಾನು ಪುನಃ ಅವತರಿಸಿ ಈ ಜಗತ್ತನ್ನೇ ಉದ್ಧರಿಸುತ್ತೇನೆಂದು ಮನುಕುಲಕ್ಕೆಪ್ರತಿಜ್ಞೆಗೈದ ಇತಿಹಾಸ ಪುಟಗಳನ್ನು ಯುಗ ಯುಗಗಳಿಂದಲೂ ಮೆಟ್ಟಿನಿಂತವನು ಯುಗಪುರುಷ ಶ್ರೀಕೃಷ್ಣ. ಭಾರತದ ಸರ್ವಮತ, ಧರ್ಮ, ಭಾಷೆ, ಸಾಹಿತ್ಯ ಸಂಸ್ಕೃತಿಗಳಲ್ಲಿ ಪ್ರೀತಿ ಸ್ಥಾಪಿಸಿದ ಆರಾಧ್ಯ ಮೂರ್ತಿ ಶ್ರೀಕೃಷ್ಣ. ಅವನ ಬದುಕೇ ಭಾರತೀಯರಿಗೊಂದು ದಿವ್ಯಸಂದೇಶ.

ಶ್ರೀಕೃಷ್ಣ ತತ್ವ ಎಲ್ಲ ಯುಗಗಳ ಆದರ್ಶ. ಇವನಲ್ಲಿ ಸರ್ವಕಾಲದ ಮುಖ್ಯ ಗುಣಗಳ ಸಮನ್ವಯವಿದೆ. ಸದಾಸಮಕಾಲೀನ ಸಮಾಜದ ಒಟ್ಟಿಗೆ ಸ್ಪಂದಿಸುವ ಮನೋಭೂಮಿಕೆಯಿದೆ. ಸರ್ವರ ಆತ್ಮಕ್ಕೆ ಸಮೀಪವಾಗುವ ಆಕರ್ಷಣೆ ದಿವ್ಯತೇಜಸ್ಸಿದೆ. ಸರ್ವ ಸಮಸ್ಯೆಗಳಿಗೆ ಉತ್ತರಿಸುವ ತತ್ವದೃಷ್ಟಿಯಿದೆ. ಉದಾತ್ತ ಬದುಕಿನ ಉತ್ತಮಿಕೆಯಿದೆ. ಇತಿಹಾಸದ ಎಳೆ ಎಳೆಗಳಲ್ಲಿ ಸೇರಿ ಹೋಗುವವರಲ್ಲಿ ವ್ಯಕ್ತಿಗಳು ಯುದ್ಧ ಪ್ರವಾಹದಲ್ಲಿ ಮರೆಯಾಗುವವರು ಹಲು ಮಾನವರು. ಆದರೆ ಲೋಕದ ಹಿತಕ್ಕಾಗಿ ಇಳಿದು ಬಂದವರು ಅವತಾರ ಪುರುಷರು. ಮನುಷ್ಯನಾದರೆ ಹುಟ್ಟು ಸಾವಿಗಳ ಕಾಲಚಕ್ರದಲ್ಲಿ ಸಿಲುಕಿ ದೈವಾಧೀನನಾಗಿ ತನ್ನ ಅಲ್ಪಶಕ್ತಿ ಅಲ್ಪಜ್ಞಾನದಿಂದ ಜೀವನದಲ್ಲಿ ಸರ್ವದಾ ಏರುಪೇರುಗಳನ್ನು ಅನುಭವಿಸುತ್ತ ಗುರಿನಿರ್ಧಾರಗಳಿಲ್ಲದೇ ಬಳಲುವರು. ಅವತಾರದಲ್ಲಿ ಅತ್ಯಂತಶಕ್ತಿ ಅಪಾರಸಾಮರ್ಥ್ಯ ಎಮರಿಲ್ಲದ ತೇಜಸ್ಸು. ಆ ಶ್ರೀಕೃಷ್ಣಲೀಲಾಮಾನುಷವಿಗ್ರಹ ಮನುಷ್ಯರೂಪದ ಅವತಾರಿ. ಆಕಾರ ಮನುಷ್ಯನದು, ಅವತಾರ ಭಗವಂತನದು. ವರ್ತಮಾನ ಬದುಕನ್ನು ತಿದ್ದಲು ಇಹದ ಜೀವನದ ಆದರ್ಶ ತಿಳಿಸಲು ಮನುಷ್ಯರ ಬದುಕಿಗೆ ಸಮೀಪವಾಗುವುದು ಮನುಷ್ಯರಂತೆ ಬಂದಾಗ ಮಾತ್ರ. ಆದರೆ ಸರ್ವ ಗುಣಗಳ ಮೌಲ್ಯಗಳ ಅಭಿವ್ಯಕ್ತಿಗೆ, ಪರರ ಜೀವನದ ಅವಲಂಬನೆಗೆ ಗುಣ ಪರಿಪೂರ್ಣನಾದ ವ್ಯಕ್ತಿ ಸರ್ವೋತ್ತಮ ಶಕ್ತಿಯೇ ಶ್ರೀಕೃಷ್ಣ ಅವತಾರಪುರುಷ.

ಕರ್ಮವೇ ಹೂಡುವುದು ತನುವನು
ಕರ್ಮವೇ ಸಲಹುವುದು ಕಡೆಯಲಿ
ಕರ್ಮವೇ ಕಳಚುವುದು ಜೀವಭ್ರಮೆಯ ಬಾಹಿರರ
ಕರ್ಮ ತಾನೇನಾದಡಾಗಲಿ
ನಿರ್ಮಮತೆಯಲಿ ಮಾಡಿ ನಮ್ಮಲಿ
ನಿರ್ಮಿಸಲು ಕಲಿಪಾರ್ಥ ನೀ ನಿರ್ಲೇಪನಹೆಯೆಂದ

ಕುಮಾರವ್ಯಾಸಭಾರತ - 6-3-55

ಭಗವಾನ್ ಶ್ರೀಕೃಷ್ಣ ಲೋಕಕ್ಕೆ ನೀಡಿದ ದಿವ್ಯ ಸಂದೇಶ ಭಗವದ್ಗೀತೆಯು ಸರ್ವಶಾಸ್ತ್ರಕ್ಕೆ ತಾಯಿ ಬೇರು. ಮಹಾಭಾರತದ ತಿರುಳನ್ನು ತೆಗೆದು ಗೀತಾ ರೂಪದಿಂದ ನೀಡಿದ್ದಾನೆ. ಹಿಂದೂ ತತ್ವಜ್ಞಾನದ ಹಿಂದೂಧರ್ಮದ, ಹಿಂದೂ ನೀತಿ ಶಾಸ್ತ್ರದ ಅತ್ಯಂತ ಶ್ರೇಷ್ಠವಾದ ಗ್ರಂಥಗಳಲ್ಲಿ ಭಗವದ್ಗೀತೆ ಒಂದಾಗಿದೆ.

ಹದಿನೆಂಟು ಅಕ್ಷೋಹಿಣಿ ಸೈನ್ಯವನ್ನು ಕುರುಕ್ಷೇತ್ರದ ಮೇಲೆ ತಂದು ನಿಲ್ಲಿಸಿದನು. ಹನ್ನೊಂದು ಅಕ್ಷೋಹಿಣಿ ಸೈನ್ಯ ಕೌರವರ ಪಕ್ಷಕ್ಕಿದ್ದರೆ, ಏಳು ಅಕ್ಷೋಹಿಣಿ ಸೈನ್ಯ ಪಾಂಡವರ ಕಡೆಗಿತ್ತು. ಈ ಪ್ರಸಂಗದಲ್ಲಿ ಯಾದವ ಶ್ರೇಷ್ಠ ವೈಷ್ಣವ ಕುಲತಿಲಕನಾದ ಶ್ರೀಕೃಷ್ಣ ಪಾಂಡವರ ಪಕ್ಷಕಟ್ಟಿನಿಂತನು. ತನ್ನ ಯಾದವ ಸೈನ್ಯವನ್ನು ಕೌರವರಿಗೆ ಕೊಟ್ಟು ತಾನು ಮಾತ್ರ ಅರ್ಜುನನ ಸಾರಥ್ಯವನ್ನು ವಹಿಸಿದನು. ಹೀಗೆ ಉಭಯ ಸೈನ್ಯಗಳು ಸನ್ನದ್ಧರಾಗಿ ಎದುರು ನಿಂತವು.

ಇನ್ನು ಸ್ವಲ್ಪಕಾಲದಲ್ಲಿ ತುಮುಲಯುದ್ಧ ಪ್ರಾರಂಭವಾಗುವ ಸಂಧಿಯ ಸಮಯ. ಅಷ್ಟರಲ್ಲಿ ಒಂದು ಆಶ್ಚರ್ಯಕರ ದಯನೀಯ ಘಟನೆ ಜರುಗಿತು. ಅರ್ಜುನನಿಗೆ ವಿಷಾದ ದುಃಖ ನೋವುಗಳು ಅವನ ಆತ್ಮವನ್ನು ಕಲುಕುತ್ತವೆ. ಧರ್ಮಯುದ್ಧವೆಂದರೆ ಕ್ಷತ್ರಿಯರಿಗೆ ಒಂದು ಸವಾಲು. ಕ್ಷಾತ್ರಧರ್ಮದ ವೀರ ವೃತ್ತಿಗೆ ಸಲ್ಲುವ ಹೋರಾಟಗಳಲ್ಲಿ ಅವನಿಗೆ ಈ ತರಹದ ದೌರ್ಬಲ್ಯ ಕನಿಕರ ಎಂದೂ ಬಂದಿರಲಿಲ್ಲ. ಈ ಘನ ಘೋರ ಯುದ್ಧಸಮಯದಲ್ಲಿ ಪರಸ್ಪರರನ್ನು ಕಡಿದುಕೊಲ್ಲಲಿಕ್ಕೆ ಸನ್ನದ್ಧರಾಗಿ ಎದುರಿಗೆ ನಿಂತ ದುರ್ಯೋಧನಾದಿ, ಬಂಧು ಬಳಗದವರನ್ನು ದ್ರೋಣ, ಭೀಷ್ಮಾಚಾರ್ಯ, ದುಂತಾದ ಗುರುಹಿರಿಯರನ್ನು ಆಪ್ತ ಸ್ನೇಹಿತರನ್ನು ನೋಡಿ ಎದೆ ನಡುಗಿತು. ತಾನು ನಡೆಸಿರುವುದು ಧರ್ಮವೋ ಅಧರ್ಮವೋ ಎಂಬ ಸಂಶಯವು ಅವನನ್ನು ಕಾಡುತ್ತದೆ. ತ್ರಿಲೋಕಗಳನ್ನು ನಡುಗಿಸಿದ ಗಾಂಡೀವಧನಸ್ಸು ಕೈಯೊಳಗಿಂದ ಕಳಚಿಬಿದ್ದಿತು. ಎದುರಾದ ಪ್ರಸಂಗವನ್ನು ನೋಡಿ ಮನಸ್ಸಿನಲ್ಲಿ ಕಾರುಣ್ಯ ಹುಟ್ಟಿತು. ಪಿತೃಪಿತಾಮಹರನ್ನು ತುಂಡರಿಸುವುದು, ಘನಪಾತಕವೆಂಬ ಕಲ್ಪನೆ ಮೂಡಿತು. ಬಂಧುಗಳ ನೆತ್ತರದಿಂದ ತಪ್ಪವೆನ್ನುವ ರಾಜ್ಯ ಭೋಗಗಳನ್ನು ಭೋಗಿಸುವುದಕ್ಕಿಂತ ಸನ್ಯಾಸವೇ ಲೇಸು, ಭಿಕ್ಷೆಬೇಡುವುದು ಉತ್ತಮ ಎಂಬ ವ್ಯರ್ಥಾಲಾಪಗಳು ಕ್ಷತ್ರಿಯನಿಗೆ ಸಲ್ಲದ ಉಕ್ತಿಗಳೆನಿಸಿತು. ದುರ್ಬಲ, ದಯೆಯದ ವಚನಗಳು ಅವನ ಬಾಯಿಯಿಂದ ಬರಲಾರಂಭಿಸಿದವು. ತಾನು ಮಾಡುತ್ತಿರುವುದು ಪಾಪದ ಕಾರ್ಯ, ಕ್ಷಣಹೊತ್ತು ನ್ಯಾಯ ಅನ್ಯಾಯದ ವಿಚಾರವು ಅವನ ಹೃದಯವನ್ನು ಹಿಂಡಿತು. ತಾನು ಕ್ಷತ್ರಿಯ ಧರ್ಮದಂತೆ ಯುದ್ಧಮಾಡಿ ದುಷ್ಟರನ್ನು ಸಂಹರಿಸಲೇಬೇಕು ಎಂಬ ಮೊದಲಿನ ಧ್ಯೇಯಗಳೆಲ್ಲ ಕರಗಿನೀರಾಗಿ ಪಾರ್ಥ ಮುಗ್ಧನಂತೆ ನಿಂತನು.

ದುಷ್ಟನಿಗ್ರಹ ಶಿಷ್ಟಪರಿಪಾಲನೆಗಾಗಿ **ಅವತಾರವೆತ್ತ ಶ್ರೀಕೃಷ್ಣನು ಸತ್ಯಧರ್ಮವನ್ನು ರಕ್ಷಿಸಲು ಶತ್ರುಗಳನ್ನೆಲ್ಲ ಸೃಷ್ಟಿಯೊಳಗಿಂದ ಸವರಿಕೊಂದು ಧರ್ಮಸಂಸ್ಥಾಪನೆಯ ಪಣತೊಟ್ಟು ದುಷ್ಟರ ನಾಶವೆಂಬ ಯಜ್ಞದ ಸೂತ್ರಧಾರನಾಗಿ ಕುರುಕ್ಷೇತ್ರದ ಪುಣ್ಯಭೂಮಿಯ ಮೇಲೆ ಪಾರ್ಥನ ಸಾರಥಿಯಾಗಿ ಅರ್ಜುನನನ್ನೇ ಈ ಕೊನೆಯ ಯುದ್ಧದ ಯಜಮಾನನೆಂದು ಸಂಕಲ್ಪಿಸುತ್ತಾನೆ. ಸರ್ವಪ್ರೇರಕನಾದ, ಶ್ರೇಷ್ಠ ಸ್ಫೂರ್ತಿಯ ಚಿಲುಮೆಯಾದ, ದಿವ್ಯಜ್ಞಾನ ಜ್ಯೋತಿ**

# ತಿರುಮಲೆ ತಿರುಪತಿ ದೇವಸ್ಥಾನಗಳು

## ತಿರುಪತಿ

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಎಸ್. ರಮೇಶ್‌ಕುಮಾರ್, ಐ.ಎ.ಎಸ್.,**
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದ ವರಿಗೆ ಅನ್ನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆ ಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹೂಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ; ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ.ತಿ.ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿ:
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿ:
--ಬೋಧಾಯನ ಧರ್ಮಸೂತ್ರ.

ಒಳಶಕ್ತಿಯು ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.

ವಂದನೆಗಳೊಡನೆ ತಮ್ಮ ವಿಶ್ವಾಸಿ,
**ಎಸ್. ರಮೇಶ್‌ಕುಮಾರ್**

ಯಾದ ಜಗನ್ನಿಯಾಮಕನಾದ ಭಗವಾನ್ ಶ್ರೀಕೃಷ್ಣ ಪರಮಾತ್ಮನು, ಅರ್ಜುನನ ಮನದಲ್ಲಿ ಮೋಹದ ಮೋಡಗಳು ಮುಸುಕಿದಾಗ, ಒಂದು ಬಗೆಯಿಂದ ಭರತಭೂಮಿಯ ಮೇಲೆ ಧರ್ಮದ ಮೇಲೆಯೇ ಅಧರ್ಮದ ದಾಳಿ ನಡೆದಂತಾಯಿತು. ಎತ್ತೆತ್ತಲೂ ನಿರಾಶೆಯ ಅಂಧಕಾರವು ಪಸರಿಸಿದಾಗ ಜ್ಞಾನಸೂರ್ಯನ ಕಿರಣಗಳಿಂದ ಗೀತೋಪದೇಶದಿಂದ ತಮಸ್ಸನ್ನು ನಾಶಮಾಡಿ ಧರ್ಮಪ್ರವರ್ತಕ ತತ್ತ್ವೋಪದೇಶವನ್ನು ಮಾಡುತ್ತಾನೆ. ಈ ಧರ್ಮ ಅಧರ್ಮಗಳು ಲೋಕಕಲ್ಯಾಣಕ್ಕೆ ಹುಟ್ಟುತ್ತವೆ. ಕ್ಷತ್ರಿಯನಿಗೆ ಧರ್ಮಯುದ್ಧ ಕರ್ಮಬದ್ಧವಾದುದು, ಮಾಡಲೇಬೇಕು. ಧರ್ಮಗ್ಲಾನಿಯಾಗಿ ಅಧರ್ಮ ರಾಕ್ಷಸೀರೂಪ ತಳೆದಾಗ ಈ ಜಗತ್ತನ್ನು ರಕ್ಷಿಸಲು ಯುದ್ಧಮಾಡಲೇಬೇಕು. ಇದು ಪಾಪಕಾರ್ಯವಲ್ಲ ಕರ್ತವ್ಯ, ಅರ್ಜುನನೇ ಯುದ್ಧಮಾಡು - ಎಂದು ಆಜ್ಞಾಪಿಸುತ್ತಾನೆ. ಹೀಗೆ ಯಾವ ಉಪದೇಶದಿಂದ ಪಾರ್ಥನು ವೀರಕಾರ್ಯಕ್ಕೆ ಪ್ರವೃತ್ತನಾದನೋ ಅದೇ ಗೀತೆಯು. ಯಾವ ಉಕ್ತಿಯಿಂದ ನವಜೀವನದ ಲೋಕಕಲ್ಯಾಣಕ್ಕಾಗಿ, ಲೋಕರಕ್ಷಣೆಗಾಗಿ ಧರ್ಮಸ್ಥಾಪನೆಗಾಗಿ ಪ್ರೇರಣೆ ನೀಡಿದನೋ ಆ ಉಕ್ತಿಯೇ ಶ್ರೀ ಭಗವದ್ಗೀತೆ. ಯಾವ ವಾಣಿಯ ಬಲದಿಂದ ಅರ್ಜುನನ ದೌರ್ಬಲ್ಯ ಅಳಿದು ಕ್ಷುದ್ರತನವು ನೀಗಿ ಅವನಲ್ಲಿ ಆರ್ಯತೇಜ ಕ್ಷಾತ್ರತೇಜಸ್ಸು ಪುನಃ ಬೆಳಗಲಾರಂಭಿಸಿತೋ ಆ ದಿವ್ಯವಾಣಿಯೇ ಗೀತೆಯು. ಆತ್ಮ ಸಾಕ್ಷಾತ್ಕಾರದ ಮಂತ್ರವೇ ಶ್ರೀ ಭಗವದ್ಗೀತೆ. ಮಾನವೀಯ ಬುದ್ಧಿಗೆ ತೋರುವ ತತ್ತ್ವಗಳಲ್ಲಿಯ ಪರಸ್ಪರವಿರೋಧದ ಸಮನ್ವಯ ಮಾಡಿ ಆಧ್ಯಾತ್ಮಿಕ ತತ್ತ್ವ ಬೋಧನೆಯೇ ಗೀತಾಸಂದೇಶ. ನಮ್ಮ ಇಡೀ ಜೀವನವನ್ನು ಪರಮಾತ್ಮಮಯ ಮಾಡಿ ಅದನ್ನೇ ಚೆನ್ನದಂತೆ ಬೆಳಗಿಸುವ ದಿವ್ಯರಸಾಯನವೇ ಪರಮಗೀತೆಯು. ನಾವು ನಮ್ಮ ಸಕಲ ಕಾರ್ಯಗಳನ್ನು ಸರ್ವಸಮರ್ಪಣಬುದ್ಧಿಯಿಂದ ಪರಮಾತ್ಮನ ನಿಮಿತ್ತಮಾತ್ರರಾಗಿ ಮಾಡಿ ನಿರ್ಲಿಪ್ತರಿದ್ದು, ಸದಾನಂದ ಲೀಲೆಯಲ್ಲಿ ಸುಖಿಸುವ ಸಾಮರ್ಥ್ಯವನ್ನು ಕೊಡುವ ಜೀವನಾಮೃತವೇ ಗೀತೆಯು. ಆಧ್ಯಾತ್ಮಿಕ ಜೀವನದ ತಿರುಳನ್ನು ಅರುಹಿ ಭಕ್ತಿ, ಜ್ಞಾನ, ಕರ್ಮಗಳ ಏಕವಾಕ್ಯತೆಯನ್ನು ಮಾಡಿ ಸಂಪೂರ್ಣ ಯೋಗದೃಷ್ಟಿಯ ಸಾಧಕರನ್ನು ಜೀವನ್ಮುಕ್ತರನ್ನಾಗಿ ಮಾಡುವ ಶ್ರೇಷ್ಠ ಶಕ್ತಿಯುಳ್ಳ ಪರಮಗ್ರಂಥವೇ ಗೀತೆಯು.

"ಕಲಿಯುಗದಲ್ಲಿ ಪುನರವತರಿಸಿ ಶ್ರೀಕೃಷ್ಣ ಬರುವುದನ್ನು ಕಾಯೋಣ", 'ಅವನು ನೀಡಿದ ಸಂದೇಶವನ್ನು, ದಿವ್ಯಜ್ಞಾನವನ್ನು', 'ನಮ್ಮ ಬದುಕಿನಲ್ಲಿ ಅರ್ಪಿಸಿಕೊಂಡು - ಧನ್ಯರಾಗೋಣ', "ಭಗವಾನ್ ಶ್ರೀಕೃಷ್ಣನಿಗೆ ನಮಿಸೋಣ".

# ಅತಿಥಿಯಜ್ಞ

---ವಿದ್ವಾನ್ 'ರಘುಸುತ'.

'ಅತಿಥಿ ದೇವೋ ಭವ'

ಅಂದರೆ, 'ಅತಿಥಿಯನ್ನು ದೇವರೆಂದು ಭಾವಿಸಿ, ವನ/ಅವಳ ಸೇವೆಯನ್ನು ಮಾಡು' ಎಂದರ್ಥ.

ತೈತ್ತಿರೀಯೋನಿಷತ್ (೧/೧೧/೨)ನಲ್ಲಿನ ಈ ಂದೇಶವು ಭಾರತೀಯ ಸಂಸ್ಕೃತಿಯಲ್ಲಿ ಅಂತರ್ಗ ನಾಗಿರುವ ಪ್ರತಿಯೊಬ್ಬ ಗೃಹಸ್ಥನ ಪ್ರಮುಖ ಕರ್ತ ್ಯವಾಗಿದೆಯೆಂದು ನಂಬುತ್ತೇವೆ.

ಹಿಂದೂ ಧರ್ಮವು ಅತಿಥಿ ಸೇವೆಯನ್ನು ಗೃಹಸ್ಥ ೀವನ ಪ್ರಮುಖ ಕರ್ತವ್ಯವೆಂದೇ ನಂಬುವುದ ದೆ, ಅದು ಅವನ ಮುಖ್ಯ ಧರ್ಮವೆಂದೂ ತಿಳಿ ುತ್ತದೆ.

ಮಹಾಭಾರತದ ಶಾಂತಿಪರ್ವ (೧೪೬/೨೧) ಾಗೂ ಅನುಶಾಸನ ಪರ್ವ (೨/೬೯) ಗಳಲ್ಲಿ ದರ ಬಗ್ಗೆ ತಿಳಿಸುತ್ತಾ, ಮನೆಗೆ ಬಂದ ಅತಿಥಿಯನ್ನು ೂಜಿಸುವುದು ಗೃಹಸ್ಥನ ಎಲ್ಲದಕ್ಕಿಂತಲೂ ದೊಡ್ಡ ರ್ಮವಾಗಿದೆ - ಎನ್ನುತ್ತದೆ.

ಆಧ್ಯಾತ್ಮಿಕತೆ ಹಾಗೂ ಧರ್ಮಗಳ ಭದ್ರ ಅಡಿಪಾ ಯದ ಮೇಲೆ ಪ್ರತಿಷ್ಠಿತವಾಗಿರುವ ಭಾರತೀಯ ಸ್ಕೃತಿಯಲ್ಲಿ ಅತಿಥಿ ಸತ್ಕಾರದ ಮಹತ್ವವನ್ನು ಎಲ್ಲ ಮುಖ ಧರ್ಮ ಗ್ರಂಥಗಳಲ್ಲಿಯೂ ಉಲ್ಲೇಖಿಸ ಾಗಿದೆ.

ಅತಿಥಿ ಸತ್ಕಾರವು ಗೃಹಸ್ಥರ ಪರಮಧರ್ಮ ಂದು ಧರ್ಮಶಾಸ್ತ್ರಗಳು ತಿಳಿಸುತ್ತಾ, ಅತಿಥಿ ಸತ್ಕಾ ರ ಬೇರೆ ಬೇರೆ ರೂಪಗಳನ್ನು ವರ್ಣಿಸುತ್ತವೆ.

ಆಚಾರ್ಯ ಮನುವಿನ (೩/೯೯) ಪ್ರಕಾರ ನೆಗೆ ಬಂದ ಅತಿಥಿಗೆ ವಿಧಿವತ್ತಾಗಿ ಕಾಲು ತೊಳೆ ುಕೊಳ್ಳಲು ನೀರನ್ನು ನೀಡಿ, ಕುಳಿತುಕೊಳ್ಳಲು ಆಸ ವನ್ನು ನೀಡಬೇಕು. ಆ ನಂತರ ಅವರವರ ಶಕ್ತಿಗೆ ನುಗುಣವಾಗಿ ಸ್ವಾದಿಷ್ಟ ಊಟವನ್ನು ಬಡಿಸಿ, ಅತಿ ಯನ್ನು ಉಚಿತ ರೀತಿಯಲ್ಲಿ ಸತ್ಕರಿಸಬೇಕು.

ಅತಿಥಿಯು ಸಮಯಾಸಮಯಗಳನ್ನು ಗಮ ಸದೆ ಬಂದರೂ ಅವನಿಗೆ ತಪ್ಪದೆ ಊಟ ಡಬೇಕೆಂದು ಮನುವು (೩/೧೦೫) ಒತ್ತಾಯಿ ತ್ತಾನೆ. ಒಂದು ವೇಳೆ ಊಟಕ್ಕೆ ನೀಡಲು ೂ ಇಲ್ಲದೆ ಇದ್ದಲ್ಲಿ, ಅವನಲ್ಲಿ ಏನಿರುತ್ತದೆಯೋ ನರಿಂದ ಅತಿಥಿಯ ಆತಿಥ್ಯವನ್ನು ನೆರವೇರಿಸಬೇ ಮ ಅವನು ತಿಳಿಸುತ್ತಾ, ಅಂತಹ ಪರಿಸ್ಥಿತಿಯಲ್ಲಿ ಲಗುವುದಕ್ಕೆ ಹುಲ್ಲಿನ ಆಸನ (ಚಾಪೆ), ಕುಳಿತು ಳ್ಳುವುದಕ್ಕೆ ನೆಲ, ಕುಡಿಯಲು ಹಾಗೂ ಕಾಲು ಳೆಯಲು ನೀರು ಮತ್ತು ಮಧುರವಾದ ಮಾತುಗಳು - ಈ ನಾಲ್ಕೂ ಅಗತ್ಯಗಳನ್ನು ಪ್ರತಿಯೊಬ್ಬ ಸಜ್ಜನನೂ ತಪ್ಪದೆ ಹೊಂದಿರಬೇಕು - ಎನ್ನುತ್ತಾನೆ. ಅದರಿಂದ ಅನ್ನ, ರೊಟ್ಟಿ - ಇತ್ಯಾದಿ ಆಹಾರ ಪದಾರ್ಥಗಳು ಇಲ್ಲದಿದ್ದಾಗ್ಯೂ ಇವುಗಳ ಮುಖಾಂತರವಾದ ಅತಿಥ್ಯ ಕಾರ್ಯವನ್ನು ನೆರವೇರಿಸಬೇಕೆಂದು ಮನು ತಿಳಿಸುತ್ತಾನೆ.

ತೃಣಾನಿ ಭೂಮಿರುದಕಂ ವಾಕ್  
ಚತುರ್ಥೀ ಚ ಸೂನೃತಾ  
ಏತಾನ್ಯಪಿ ಸತಾಂ ಗೇಹೇ  
ನೋಚ್ಛಿದ್ಯಂತೇ ಕದಾಚನ  
(ಮನುಸ್ಮೃತಿ ೩/೧೦೧)

ಅತಿಥಿ ಸತ್ಕಾರವನ್ನು ಭಾರತೀಯ ಸಂಸ್ಕೃತಿಯ ದೃಷ್ಟಿಯಿಂದ 'ಯಜ್ಞ' ಎಂದು ಕರೆಯಲಾಗುತ್ತದೆ. ಗೃಹಸ್ಥನು ನೆರವೇರಿಸ ಬೇಕಾಗಿರುವ ಪಂಚ ಮಹಾಯಜ್ಞಗಳಲ್ಲಿ ಅತಿಥಿ ಯಜ್ಞವು ಬಹು ಮುಖ್ಯವಾದುದಾಗಿತ್ತು. ಅವನ ದೈನಿಕ ಜೀವನದ ಒಂದು ಪ್ರಮುಖ ಅಂಗವಾಗಿತ್ತು.

ಮನುವಿನ (೩/೬೮) ಅನುಸಾರ ಪ್ರತಿಯೊಬ್ಬ ಗೃಹಸ್ಥನೂ ಮನೆಯಲ್ಲಿ ಒಲೆ, ಬೀಸುವ ಕಲ್ಲು, ಪೊರಕೆ, ಒರಳು - ಒನಕೆ ಹಾಗೂ ನೀರಿನ ಮಡಿಕೆಗಳಿದ್ದು, ಈ ಐದೂ ಸ್ಥಳಗಳ ಬಳಿ ಜೀವಿ (ಕ್ರಿಮಿಕೀಟ) ಗಳ ಹತ್ಯೆಯು ಆಗುತ್ತಿರುತ್ತದೆ. ಆದುದರಿಂದ ಈ ಪಂಚಸೂನಾ ದೋಷದ ನಿವೃತ್ತಿಗಾಗಿ ಪಂಚಮಹಾಯಜ್ಞಗಳನ್ನು ರೂಪಿಸಲಾಗಿದೆ - ಎಂದು ತಿಳಿಸುತ್ತಾನೆ.

ಇವುಗಳಲ್ಲಿ ಅತಿಥಿಗಳಿಗೆ ಭೋಜನ ಇತ್ಯಾದಿಗಳ ಸತ್ಕಾರಮಾಡುವುದರಿಂದ, ಅವನ್ನು 'ನೃಯಜ್ಞ' ಅಥವಾ 'ಮನುಷ್ಯ ಯಜ್ಞ' ಎಂದು ಕರೆಯಲಾಗುತ್ತದೆ. ಈ ರೀತಿಯಲ್ಲಿ ಅತಿಥಿ ಸೇವೆಗೆ ಯಜ್ಞಕ್ಕೆ ಸಮಾನವಾದ ಮಹತ್ತತೆಯನ್ನು ನೀಡಲಾಗಿದೆ.

ಮಹಾಭಾರತದ ಅರಣ್ಯಪರ್ವ (೨/೬೨) ದಲ್ಲಿ ಅತಿಥಿ ಸೇವೆಯ ವರ್ಣನೆಯನ್ನು ಮಾಡುತ್ತಾ, ಹೀಗೆಂದು ತಿಳಿಸಲಾಗಿದೆ.

'ಅತಿಥಿಯನ್ನು ಪ್ರೇಮಪೂರಿತ ದೃಷ್ಟಿಯಿಂದ ನೋಡಬೇಕು; ಮನಸ್ಸಿನಲ್ಲಿ ಅವನ ಹಿತಚಿಂತನೆಯನ್ನು ಮಾಡಬೇಕು; ಮಧುರವಾದ ಮಾತುಗಳಿಂದ ಅವನನ್ನು ಮಾತನಾಡಿಸಬೇಕು; ಅವನು ಹೋಗುತ್ತೇನೆಂದಾಗ ಸ್ವಲ್ಪ ದೂರದವರೆಗೆ ಅವನ ಹಿಂದೆ ಅಥವಾ ಅವನ ಜೊತೆಯಲ್ಲಿ ಹೋಗಬೇಕು; ಹಾಗೂ ಮನೆಯಲ್ಲಿ ಇರುವವರೆಗೆ ಅವನ ಬಳಿ ಕುಳಿತು ಮಾತನಾಡುತ್ತಿರಬೇಕು'--

ಎನ್ನುವ ಈ ಐದೂ ರೀತಿಯ ದಕ್ಷಿಣೆಗಳನ್ನು ಅತಿಥಿಗೆ ಅರ್ಪಿಸಬೇಕು. ಇದೇ 'ಅತಿಥಿಯಜ್ಞ'.

ಗೃಹಸ್ಥನು ನೆರವೇರಿಸುವ ಪಂಚಮಹಾಯಜ್ಞಗಳಲ್ಲಿ 'ನೃಯಜ್ಞ' (ಮನುಷ್ಯಯಜ್ಞ - ಅತಿಥಿ ಸತ್ಕಾರ) ವನ್ನು ಎಲ್ಲದಕ್ಕಿಂತಲೂ ಹೆಚ್ಚಿನದಾದ, ಮಹತ್ವಪೂರ್ಣ ಸೇವೆಯೆಂದು ಪರಿಗಣಿಸಲಾಗಿದೆ.

ಈ ನೃಯಜ್ಞದ ಮೂಲದಲ್ಲಿ ಮಾನವನ ಬಗ್ಗೆ ತೋರುವ ದಯೆ ಅನುಕಂಪಗಳ ಸಹಜ ಪ್ರವೃತ್ತಿ ಸ್ಥಾಪಿತವಾಗಿದೆ. ಅಂದರೆ ಅತಿಥಿ ಯಜ್ಞದ ಮುಖಾಂತರ ಜನರಲ್ಲಿ ಪರಸ್ಪರ ಸೌಹಾರ್ದ, ಸ್ನೇಹ, ದಯೆ, ಕರುಣೆ, ಉದಾರತೆ - ಇತ್ಯಾದಿ ಸದ್ಭಾವನೆಗಳಿಗೆ ಪುಷ್ಟಿ ದೊರೆಯುತ್ತದೆ. ಈ ಗುಣಗಳು ಜನರಲ್ಲಿ ಹೆಚ್ಚು ಹೆಚ್ಚಾಗಿ ಹರಡಲು ಸಹಾಯಮಾಡುತ್ತವೆ.

ಅತಿಥಿಯನ್ನು ದೇವರಿಗೆ ಸಮಾನವೆಂದು ಭಾರತೀಯ ಸಂಸ್ಕೃತಿಯು ನಂಬಿದೆ ಹಾಗೂ ಅದನ್ನು ಸ್ವೀಕರಿಸಿದೆ. ಈ ರೀತಿಯ ಅತಿಥಿಯ ಸೇವೆಯಿಂದ ದೇವರ ಸೇವೆ ಆಗಿ, ದೇವರು ಈ ಮೂಲಕ ಖಂಡಿತ

**ನ ಜಾನೇ ಕಿಸ್ ರೂಪಮೇ ನಾರಾಯಣ ಮಿಲ್‌ಜಾಯ್ - ಎಂಬುದು ಹಿರಿ ಕವಿಯ ಮಾತು. ನಾರಾಯಣ ಯಾವರೂಪದಲ್ಲಿಯಾದರೂ ಬರಬಹುದು 'ಏನುಬಂದಿರಿ ಹದುಳವಿದ್ದಿರೆ - ಎಂದು ಪ್ರಸನ್ನ ಚಿತ್ತರಾಗಿ ಮಾತನಾಡಿಸಿ ಯೋಗಕ್ಷೇಮ ವಿಚಾರಿಸುವುದು ದೊದಲಕರ್ತವ್ಯ ಕಾರಣ ಬಂದಿರುವ ಅತಿಥಿ ದೈವವೇ ಆಗಿರಬಾರದೇಕೆ ಎಂಬ ಅತಿಥೇಯ ಧೋರಣೆ. ಅದೊಂದು ಯಜ್ಞ ಎಂಬುದನ್ನು ಸಕಾರಣವಾಗಿ ನಿರೂಪಿಸಲಾಗಿದೆ ಇಲ್ಲಿ.**

ಪ್ರಸನ್ನಗೊಳ್ಳುತ್ತಾನೆ, ಸುಪ್ರೀತನಾಗುತ್ತಾನೆ ಎಂದು ನಂಬಲಾಗಿದೆ.

ಗೃಹಸ್ಥನಿಗೆ ಅತಿಥಿಯ ವಿನಹ ಬೇರೆ ದೇವರೇ ಇಲ್ಲ. ಅವನೇ ಪ್ರತ್ಯಕ್ಷ ದೇವ ಎಂದು ಮಹಾಭಾರತದ ಶಾಂತಿಪರ್ವ (೨/೯೧) ದಲ್ಲಿ ಹೇಳಿದೆ. ಅತಿಥಿಗಳಿಗೆ ಆದರ ತೋರುವ ನಾಡಿನಲ್ಲಿ, ದೇವತೆಗಳು ತಮಗೆ ತಾವೇ ಬಂದು ನೆಲೆಸುವರು ಎಂದು ಹೇಳಲಾಗುತ್ತದೆ.

ಮನೆಗೆ ಬರುವ ಅತಿಥಿಯು ಆ ಮನೆಯ ಯಜಮಾನನ ಪಾಪಗಳನ್ನೆಲ್ಲ ದೂರಮಾಡಿ, ಅವನನ್ನು ಪಾಪಗಳಿಂದ ಮುಕ್ತಗೊಳಿಸುವನು. ಅಂತೆಯೇ ಅವನು ಧನ, ಆಯುಸ್ಸು, ಯಶಸ್ಸುಗಳನ್ನು ನೀಡಿ ಸ್ವರ್ಗದ ಹೇತುವನ್ನಾಗಿ ಮಾಡುವನು. ಇದು ಭಾರತೀಯ ಧರ್ಮಶಾಸ್ತ್ರದ ವಿಧಾನವಾಗಿದೆ.

ಮಿತ್ರನಾಗಲಿ, ಶತ್ರುವಾಗಲಿ ಅಥವಾ ಮೂರ್ಖನಾಗಲಿ, ಪಂಡಿತನಾಗಲಿ, ಅತಿಥಿಯು ಬರುವುದು ಬಲಿ ವೈಶ್ವೇದೇವನು ಬರುವಂತಾಗುವುದರಿಂದ ಯಜಮಾನನು ಸ್ವರ್ಗವನ್ನು ಪಡೆಯಲು ಸಹಾಯಕನಾಗುತ್ತಾನೆ. ಇವನ್ನು ಪರಾಶರ ಸ್ಮೃತಿ (೧/೪೦) ಯಲ್ಲಿ ವಿವರಿಸಲಾಗಿದೆ.

ವ್ಯಕ್ತಿಯು ಅತಿಥಿ ಸತ್ಕಾರ ಮಾಡುವುದರಿಂದ ಧನ, ಆಯುಸ್ಸು, ಯಶಸ್ಸು, ಪುಣ್ಯ, ಸ್ವರ್ಗ ಹಾಗೂ ಅನಂತ ಆನಂದವನ್ನು ಪಡೆಯುವನು. ಇದಕ್ಕೆ ಬದಲಾಗಿ ಅತಿಥಿಯನ್ನು ನಿರ್ಲಕ್ಷಿಸಿ, ಉಪೇಕ್ಷೆ ಮಾಡಿ, ಅವನನ್ನು ಅಪಮಾನಗೊಳಿಸಿದ್ದೇ ಆದರೆ, ಆ ವ್ಯಕ್ತಿಯು ಘೋರ ಪಾಪಕ್ಕೆ ಗುರಿಯಾಗುತ್ತಾನೆ.

ಇದರ ಬಗ್ಗೆ ಮಹಾಭಾರತದಲ್ಲಿ ಉಲ್ಲೇಖವೂ ಇದೆ. ಗೃಹಸ್ಥನ ಮನೆಯಿಂದ ಯಾರಾದರೂ ಅತಿಥಿಯು ಭಿಕ್ಷೆಯನ್ನು ಪಡೆಯದೆ, ನಿರಾಶೆ ಹೊಂದಿ, ಬರಿಗೈನಿಂದ ಹೋದದ್ದೇ ಆದರೆ, ಆ ಅತಿಥಿಯು ತನ್ನ ಪಾಪವನ್ನು ಆ ಗೃಹಸ್ಥನಿಗೆ ರವಾನಿಸಿ, ಆ ಗೃಹಸ್ಥನ ಪುಣ್ಯವನ್ನೆಲ್ಲ ತಾನು ತೆಗೆದುಕೊಂಡು ಹೊರಟು ಹೋಗುವನು.

ಅತಿಥಿರ್ಯಸ್ಯ ಭಗ್ನಾಶೋ
ಗೃಹಾತ್ ಪ್ರತಿನಿವರ್ತತೇ
ಸ ದತ್ವಾ ದುಷ್ಕೃತಂ ತಸ್ಮೈ
ಪುಣ್ಯಮಾದಾಯ ಗಚ್ಛತಿ
(ಶಾಂತಿಪರ್ವ ೧೯/೧೨)

ಯೋಗಿ ಹಾಗೂ ಸಿದ್ಧ ಪುರುಷರು ಮಾನವನಿಗೆ ಒಳ್ಳೆಯದನ್ನು ಮಾಡುವುದಕ್ಕಾಗಿ ವಿವಿಧ ರೂಪಗಳಲ್ಲಿ ಕಂಡುಬರುವರು. ಅದರಿಂದ ಅಂತಹವರನ್ನು ಎರಡೂ ಕೈಗಳನ್ನು ಜೋಡಿಸಿ, ಅವರ ಆತಿಥ್ಯವನ್ನು ಮಾಡಬೇಕಾಗಿದೆ. ಆದುದರಿಂದ ಅತಿಥಿಯು ಎಂತಹವನೇ ಆದರೂ ಸತ್ಕಾರಕ್ಕೆ ಯೋಗ್ಯನಾದವನೆಂದೂ, ದೈವಸ್ವರೂಪನೆಂದೂ ಭಾವಿಸಬೇಕಾದುದು ಅಗತ್ಯ ಎಂದು ವಾಯುಪುರಾಣ (೭೧/೭೪) ದಲ್ಲಿ ಹೇಳಿದೆ.

ಭಗವಾನ್ ಶ್ರೀರಾಮ ಹಾಗೂ ಶ್ರೀಕೃಷ್ಣರು ಆತಿಥ್ಯಧರ್ಮದ ಮೂರ್ತಿಮಾನ್ ಸ್ವರೂಪರು. ಭಗವಾನ್ ಶ್ರೀಕೃಷ್ಣನಿಂದ ನೆರವೇರಿದ ಮಹರ್ಷಿ ದೂರ್ವಾಸನ ಅತುಲನೀಯ ಅತಿಥಿ ಸತ್ಕಾರವು ಸುಪ್ರಸಿದ್ಧವಾದುದು.


**ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ**

**ಅಷ್ಟದಳ ಪದ್ಮಾರಾಧನೆ**

ತಿರುಮಲೆಯಲ್ಲಿ ಸ್ವಾಮಿಗೆ ಪ್ರತಿಮಂಗಳವಾರವೂ ಎರಡನೇ ಅರ್ಚನೆಯ ಸಮಯದಲ್ಲಿ ಅಷ್ಟೋತ್ತರನಾಮಗಳನ್ನು ಹೊಂದಿದ 108 ಬಂಗಾರದ ಪದ್ಮಪುಷ್ಪಗಳಿಂದ ಆರಾಧನೆ ನಡೆಸಲಾಗುತ್ತದೆ.

ಈ ಅರ್ಚನೆಯ ಸಮಯದಲ್ಲಿ ರೂ. 3500/– ಶುಲ್ಕದಿಂದ ಗೃಹಸ್ಥರು ಪಾಲುಗೊಳ್ಳಬಹುದು. ಅವರೊಂದಿಗೆ ಅವರ ಕಡೆಯ ಐದು ಮಂದಿ ಈ ಆರಾಧನೆಗೆ ಅನುಮತಿಸಲ್ಪಡುತ್ತಾರೆ.

ಈ ಸೇವೆಯನ್ನು ಮಾಡಿಸುವ ಗೃಹಸ್ಥರಿಗೆ ಒಂದು ಶೇಷವಸ್ತ್ರ ಒಂದು ಕುಪ್ಪಸದ ಕಣ, ಹತ್ತು ದೊಡ್ಡ ಲಾಡು, ಹತ್ತು ವಡೆಗಳನ್ನು ಪ್ರಸಾದವಾಗಿ ನೀಡಲಾಗುವುದು.

ಭಕ್ತರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿ ಮಾಡಲಾಗಿದೆ.

**ತಿ. ತಿ. ದೇವಸ್ಥಾನಗಳು.**


ಇದೇ ರೀತಿಯಲ್ಲಿ ಮಹರ್ಷಿ ಮುದ್ಗಲನೂ ಕೂಡ ಅತಿಥಿ ಧರ್ಮದ ಪರಮ ಆದರ್ಶ ಮಹನೀಯನು ಎಂದು ಹೇಳಲಾಗುತ್ತದೆ. ಮಹರ್ಷಿ ಮುದ್ಗಲನು ಮಹಾನ್ ತಪಸ್ವಿಯಾಗಿದ್ದನು. ಬೆಳೆಯ ಕೊಯ್ಲು ಆದ ಮೇಲೆ, ಜಮೀನಿನ ಮೇಲೆ ಉದುರಿ ಬಿದ್ದಿರುವ ಧಾನ್ಯವನ್ನು ಆರಿಸಿ, ಅದರ ಹೊಟ್ಟು ತೆಗೆದು ತನ್ನ ಸಂಸಾರದ ಪೋಷಣೆ ಮಾಡುತ್ತಿದ್ದನು. ಇದನ್ನು 'ಶಿಲೋಚ್ಛ - ವೃತ್ತಿ' ಎಂದು ಕರೆಯುತ್ತಾರೆ. ಈ ವೃತ್ತಿಯಂತೂ ಪ್ರತಿನಿತ್ಯವೂ ಸಾಧ್ಯವಾಗುತ್ತಿರಲಿಲ್ಲ. ಆತನದ್ದು ಇದು ತ್ಯಾಗಮಯ ಜೀವನವಾಗಿತ್ತು.

ಒಮ್ಮೆ ಅಮಾವಾಸ್ಯೆಯ ದಿನದಂದು ಮಹರ್ಷಿ ದೂರ್ವಾಸನು ಮುದ್ಗಲನ ಕುಟೀರ ಬಳಿಗೆ ಬಂದ. ಆತನನ್ನು ಕಂಡಕೂಡಲೇ ಮುದ್ಗಲನಿಗೂ ಹಾಗೂ ಆತನ ಪರಿವಾರಕ್ಕೂ ಅಪಾರ ಸಂತೋಷವಾಯಿತು. ಅಂತೆಯೇ ಮಹರ್ಷಿಯ ಪಾದಪ್ರಕ್ಷಾಳನೆ ಮಾಡಿ, ಆಸನವನ್ನು ನೀಡಿ, ಆತನಿಗೆ ಪೂಜೆಯನ್ನು ಸಲ್ಲಿಸಿ, ಆಹಾರವನ್ನು ಅರ್ಪಿಸಿ, ಅದನ್ನು ಸೇವಿಸುವಂತೆ ಪ್ರಾರ್ಥಿಸಿದರು. ಬಹಳ ಕಷ್ಟದಿಂದ ಮನೆಯಲ್ಲಿ ಸ್ವಲ್ಪ ತಂಬಿಟ್ಟನ್ನು ಶೇಖರಿಸಿಟ್ಟಿದ್ದರು. ದೂರ್ವಾಸರು ಆ ತಂಬಿಟ್ಟನ್ನು ಸೇವಿಸಿದರು. ಅದು ತುಂಬಾ ಸ್ವಾದಿಷ್ಟವಾಗಿತ್ತು.

ಮುದ್ಗಲನ ಪರಿವಾರದವರು ಬಹಳ ದಿನಗಳಿಂದ ಉಪವಾಸವಿದ್ದು, ಆ ತಂಬಿಟ್ಟನ್ನು ರಕ್ಷಿಸಿಟ್ಟಿದ್ದರು. ಅದನ್ನು ಈಗ ದೂರ್ವಾಸರಿಗೆ ನೀಡಲಾಯಿತು. ಹೀಗಾಗಿ ಮನೆಯಲ್ಲಿ ಊಟ ಮಾಡುವುದಕ್ಕೆ ಏನೂ ಇಲ್ಲವಾಯಿತು. ಪರಿಣಾಮವಾಗಿ ಪರಿವಾರದವರು ಉಪವಾಸವೇ ಇರಬೇಕು. ದಿನ ದಿನಗಳವರೆಗೆ ಹೀಗೆ ಕಾಲ ನೂಕಬೇಕಾಯಿತು. ಮುದ್ಗಲನ ಹೆಂಡತಿ ಮಕ್ಕಳು ಹಸಿವನ್ನು ದೂರಮಾಡಿಕೊಳ್ಳಲು ದೇವರ ಭಜನೆ ಮಾಡುವುದರಲ್ಲಿ ತಮ್ಮ ಕಾಲವನ್ನು ಕಳೆಯತೊಡಗಿದರು.

ದೂರ್ವಾಸರಿಗೆ ತಂಬಿಟ್ಟು ರುಚಿಕರವಾಗಿದ್ದುದರಿಂದ ಮತ್ತೆ ಮತ್ತೆ ಇವರ ಮನೆಗೆ ಬರತೊಡಗಿದರು. ತಮ್ಮ ಪರಿವಾರವು ಉಪವಾಸವಿದ್ದರೂನೂ ಮತ್ತೆ ಮತ್ತೆ ಬರುತ್ತಿದ್ದ ದೂರ್ವಾಸರ ಬಗ್ಗೆ ಬೇಸರಪಟ್ಟುಕೊಳ್ಳದೆ ಅವರಿಗೆ ಆತಿಥ್ಯ ಮಾಡುತ್ತಾ, ತಿಂಗಳಾನುಗಟ್ಟಲೆ ಉಪವಾಸವಿರುತ್ತಿದ್ದರು. ಆತಿಥ್ಯ ಭಾವದಲ್ಲಿ ಸ್ವಲ್ಪವೂ ನ್ಯೂನತೆ ತೋರಲಿಲ್ಲ. ಬದಲಾಗಿ ಆ ಆಸಕ್ತಿ ಹೆಚ್ಚುತ್ತಾ ಹೋಯಿತು.

ಇವರ ಫಲವು ಉತ್ತಮವಾದುದೇ ಆಗಿತ್ತು.

**ಮುದ್ಗಲನ ಜೀವನ** ಕಾಲ ಮುಗಿಯಿತು. ದೇವ **ಲೋಕದಿಂದ ವಿಮಾನವು** ಬಂದಿತು. ಆದರೆ **ವರಲ್ಲಿ ಹೋಗಲು** ಮುದ್ಗಲನು ನಿರಾಕರಿಸಿದನು. **ರಣ ಅಲ್ಲಿ ಬರೀ** ಭೋಗಭಾಗ್ಯಳಿರುತ್ತವೆಯೆ **ಸಹ ಬೇರೇನೂ** ಇಲ್ಲ ಎಂಬುದಾಗಿ. ಕಡೆಯಲ್ಲಿ ತನಿಗೆ ಪರಮಪದವು ಪ್ರಾಪ್ತವಾಯಿತು.

ಇಂತಹ ತ್ಯಾಗಮಯಿ ಹಾಗೂ ಆತಿಥ್ಯಮಯ ಥೆಗಳಿಂದ ಸದ್ಗ್ರಂಥಗಳು ತುಂಬಿಹೋಗಿವೆ.

ಇಂತಹುದೇ ಒಂದು ಕಥೆ ಕಪೋತ (ಪಾರಿ ಳ) ದಂಪತಿಗಳದ್ದು.

ಗೋದಾವರಿ ನದಿಯ ಸಮೀಪದಲ್ಲಿ ಓರ್ವ ೇಡನು ಬೇಟೆಗಾಗಿ ಹೋದನು. ಆ ದಿನ ರ್ತಿ ಅನೇಕ ಪಕ್ಷಿಗಳನ್ನು ಅವನು ಕೊಂದ. ಇದ ಲ್ಲಿ ಸಾಯಂಕಾಲವೂ ಆಯಿತು. ಕತ್ತಲೂ ಯಿತು. ಬಲವಾಗಿ ಗಾಳಿ, ಮಳೆಗಳು ಬೀಸಲಾ ಂಭಿಸಿದುವು. ಬಲವಾದ ಆಲಿಕಲ್ಲು ಬೀಳತೊಡ ತು.

ಛಳಿಯಿಂದ ಗಡಗಡ ನಡುಗುತ್ತಾ ಬೇಡನು ಂದು ಮರದ ಕೆಳಗೆ ನಿಂತ. ಆ ರಾತ್ರಿ ಅಲ್ಲಿಯೇ ಶ್ರಮಿಸಿಕೊಳ್ಳಲು ತೀರ್ಮಾನಿಸಿದ. ಅದೇ ಮರದ ೀಲೆ ಪಾರಿವಾಳ ದಂಪತಿಗಳು ವಾಸಿಸುತ್ತಿದ್ದುದು. ಣ್ಣು ಪಾರಿವಾಳ ಇನ್ನೂ ಹಿಂತಿರುಗಿರಲಿಲ್ಲ. ಇದ ಂದ ಗಂಡು ಪಾರಿವಾಳವು ತನ್ನ ಪತ್ನಿಯ ಬಗ್ಗೆ ಂತೆಗೆ ಒಳಗಾಗಿತ್ತು.
ಆದರೆ ಹೆಣ್ಣು ಪಾರಿವಾಳವು ಹಿಂತಿರುಗುವುದಾ ರೂ ಹೇಗೆ? ಅದು ಬೇಡನ ಬಲೆಯಲ್ಲಿ ಸಿಕ್ಕಿಬಿ ತ್ತು.

ಬೇಡನು ಪಂಜರ ಹಾಗೂ ಬಲೆಗಳನ್ನು ಮರದ ಗೆ ಇಟ್ಟ.

ತನ್ನ ಗಂಡನು ತನಗಾಗಿ ಅಳುತ್ತಿರುವುದನ್ನು ಡ ಹೆಣ್ಣು ಪಾರಿವಾಳವು ಸಮಾಧಾನಗೊಳಿಸುವ ತಿಯಲ್ಲಿ ಹೇಳಿತು.

"ಹೇ ಪ್ರಾಣಪ್ರಿಯ! ನನ್ನ ಮೇಲೆ ನಿನಗೆ ತುಂಬಾ ತಿ ಇದೆ. ನನ್ನ ಒಂದೇ ಒಂದು ಪ್ರಾರ್ಥನೆ ನ್ನು ದಯವಿಟ್ಟು ಲಾಲಿಸು. ಈ ವ್ಯಾಧನು ಇಂದು ಕಸ್ಮಿಕವಾಗಿ ನಮಗೆ ಅತಿಥಿಯಾಗಿದ್ದಾನೆ. ನಾವಿ ವ ಮನೆಯ ಬಳಿ ಬಂದಿರುವುದರಿಂದ ಇವನು ಭ್ಯಾಗತನೇ ಅಲ್ಲ, ಸನಿಹದ ಅತಿಥಿಯೂ ಆಗಿ ನೆ. ಇವನು ಚಳಿಯಿಂದ ತುಂಬಾ ನೊಂದಿರು ನು. ಎಲ್ಲಿಂದಲಾದರೂ ಒಣಗಿದ ಕಡ್ಡಿಗಳು ಗೂ ಬೆಂಕಿಯನ್ನು ತಂದು ಹಾಗಿ, ಬೆಂಕಿ ಹೊತ್ತಿಸಿ, ಇವನನ್ನು ಬೆಚ್ಚಗಿರುವಂತೆ ಮಾಡು. ಇವನ ಕಷ್ಟ ವನ್ನು ದೂರಮಾಡು!"

ಬಲೆಯಲ್ಲಿ ಸಿಕ್ಕಿ ಹಾಕಿಕೊಂಡಿರುವ ಹೆಣ್ಣು ಪಾರಿ ವಾಳದ ದನಿಯನ್ನು ಆಲಿಸಿ, ಗಂಡು ಪಾರಿವಾಳವು ತುಂಬಾ ದುಃಖಗೊಂಡಿತು. ಆದರೆ ಧರ್ಮಮಾರ್ಗ ವನ್ನು ಅನುಸರಿಸಿ, ಧೈರ್ಯ ವಹಿಸಿ, ಹೆಣ್ಣು ಪಾರಿವಾ ಳವು ಹೇಳಿದಂತೆ ಮಾಡಲು ನಿರ್ಧರಿಸಿತು.

ಅಂತೆಯೇ ಅಲ್ಲಲ್ಲಿ ಬಿದ್ದಿದ್ದ ಕಡ್ಡಿ, ಕಾಷ್ಠಗಳನ್ನು ಮರದ ಕೆಳಗೆ ರಾಶಿ ಹಾಕಿ, ಎಲ್ಲಿಂದಲೋ ಉರಿ ಯುವ ಕಡ್ಡಿಯನ್ನು ತಂದು ಅದಕ್ಕೆ ಸೋಕಿಸಿತು. ಬೆಂಕಿ ಹೊತ್ತಿ ಉರಿಯಿತು.

ಅಗ್ನಿಯು ಪ್ರಜ್ವಲಗೊಂಡ ಕೂಡಲೇ ಬೇಡನು ತನ್ನ ಕೈಕಾಲುಗಳನ್ನು ಮುಂದೆ ಚಾಚಿ, ಚಳಿಯನ್ನು ದೂರ ಮಾಡಿಕೊಂಡ. ಮೈಯೆಲ್ಲಾ ಬೆಚ್ಚಗಾಯಿತು. ಆದರೆ ಅವನಿಗೆ ತುಂಬಾ ಹಸಿವಾಯಿತು. ಸುಮ್ಮನೆ ಇತ್ತ ಅತ್ತ ನೋಡತೊಡಗಿತು.

ಅವನ ಕಷ್ಟದ ಪರಿಸ್ಥಿತಿಯನ್ನು ನೋಡಿ, ಗಂಡು ಪಾರಿವಾಳಕ್ಕೆ ಅಯ್ಯೋ ಎನ್ನಿಸಿತು. 'ಅವನು ಬೇಡನೇ ಇರಬಹುದು, ತನ್ನ ಪತ್ನಿಯನ್ನು ಸೆರೆಹಿ ಡದ ಕಟುಕನೇ ಆಗಿರಬಹುದು. ಆದರೆ ಅವನು ನಮ್ಮ ಅತಿಥಿ. ಅವನನ್ನು ಆದರಿಸುವುದು ನಮ್ಮ ಧರ್ಮ. ಅವನ ಹಸಿವು ತೀರಿದರೆ, ನನ್ನ ಕರ್ತವ್ಯ ಪೂರ್ತಿ ಮಾಡಿದಂತಾಗುತ್ತದೆ." ಎಂದು ಹೇಳಿ ಬೆಂಕಿಯಲ್ಲಿ ಬಿದ್ದು ಬೆಂದುಹೋಯಿತು. ಇದನ್ನು ಕಂಡ ಹೆಣ್ಣು ಪಾರಿವಾಳವು ಬಲೆಯಲ್ಲೇ ಅಸುವನ್ನು ನೀಗಿತು.

ತನ್ನ ಕಣ್ಣೆದುರುಗಡೆಯೇ ಎರಡು ಪಕ್ಷಿಗಳು ಪ್ರಾಣ ಕಳೆದುಕೊಂಡುದನ್ನು ಕಂಡ ಬೇಡನು, ದಿಗ್ಭ್ರ ಮೆಗೊಂಡನು. ತನಗಾಗಿ ಪ್ರಾಣತ್ಯಾಗ ಮಾಡಿದ ಕಪೋತ ದಂಪತಿಗಳ ಚಿತ್ರ ಅವನ ಕಣ್ಣೆದುರು ಗಡೆ ಸದಾ ನಿಲ್ಲುವಂತಾಯಿತು. ಅವುಗಳ ಕರ್ತವ್ಯ ನಿಷ್ಠೆ ಅವನ ಮನಸ್ಸನ್ನು ಕೆಡಿಸಿತು. ದುಃಖನಂತಾದ. ತುಂಬಾ ಪಶ್ಚಾತ್ತಾಪಗೊಂಡ. ಕೂಡಲೇ ಬಲೆಯ ಲ್ಲಿದ್ದ ಪಕ್ಷಿಗಳನ್ನೆಲ್ಲ ಬಿಟ್ಟು ತನ್ನ ಮನೆಯ ಕಡೆ ನಡೆದ. ಅಂದಿನಿಂದ ಅವನು ಪಕ್ಷಿಗಳನ್ನು ಬೇಟೆಯಾಡುವ ವೃತ್ತಿಗೇ ತಿಲಾಂಜಲಿಯಿತ್ತ.

ಅತಿಥಿ ಸತ್ಕಾರ ಮಾಡಿದ ಈ ಮಹಾನ್ ಪುಣ್ಯ ದಿಂದ ಗಂಡು ಹೆಣ್ಣು ಪಾರಿವಾಳಗಳು ಭಗವಂತನ ಧಾಮವನ್ನು ಸೇರಿ, ಮೋಕ್ಷಪಡೆದುವು. ಇಂತಹ ಧರ್ಮಾತ್ಮ ಪಕ್ಷಿಗಳ ಸಂಸರ್ಗದಿಂದ ಬೇಡನೂ ಕೂಡ ಹಿಂಸಾವೃತ್ತಿಯನ್ನು ತ್ಯಜಿಸಿದ. ತಪಸ್ಸು ಮಾಡಿ, ಶುದ್ಧಮನಸ್ಕನಾಗಿ, ಋಷಿ ಸಮಾನ ಜೀವನ ನಡೆಸಿದ.

ಈ ರೀತಿಯಾಗಿ ಭಾರತೀಯ ಸಂಸ್ಕೃತಿಯು ಅತಿಥಿಯನ್ನು ದೇವತಾರೂಪದಲ್ಲಿ ಕಂಡು, ತನ್ನ ಸರ್ವಸ್ವವನ್ನೂ ಸಮರ್ಪಣೆ ಮಾಡಿಯೂ ಕೂಡ ಅವರ ಸೇವಾ ಶುಶ್ರೂಷೆಯನ್ನು ಮಾಡುವ ಮಂತ್ರವನ್ನು ನೀಡಿದೆ.

ಇಂದು ಭೌತಿಕವಾದದ ಸಂಸ್ಕೃತಿ, ವ್ಯಕ್ತಿ ಸ್ವಾರ್ಥದ ಜೀವನ, ವ್ಯಕ್ತಿ ಸ್ವಾರ್ಥ ಪರಾಯಣತೆ, ಹಣಕ್ಕೆ ಹೆಚ್ಚಿನ ಮಹತ್ವ ಕೊಡುವುದು ಇತ್ಯಾದಿಗಳ ಫಲಸ್ವರೂಪವಾಗಿ ಭಾರತೀಯ ಜೀವನದಿಂದಲೇ ಆತಿಥ್ಯ ಭಾವನೆ ದೂರವಾಗುತ್ತಿದೆ. ವಿದೇಶೀಯರಾಗಿ ಭಾರತಕ್ಕೆ ಬಂದ ಮುಸ್ಲಿಮರು, ಯುರೋಪ್ಯರು ನಮ್ಮ ಈ ಆತಿಥ್ಯತತ್ವವನ್ನು ದುರುಪಯೋಗಪಡಿಸಿಕೊಂಡಿದುದೂ ಇದಕ್ಕೆ ಕಾರಣವಾಗಿರಬಹುದು. ಅಲ್ಲದೆ ಸಮಾಜದ ಒಂದು ವರ್ಗದಲ್ಲಿ ಆ ವಿದೇಶೀಯರ ಗುಣಗಳೂ ಒಂದಾಗಿ ಮತ್ತೆ ಮತ್ತೆ ಅವು ಪ್ರಸ್ಫುಟಗೊಳ್ಳುತ್ತಿರುವುದೂ ಮತ್ತೊಂದು ಕಾರಣ.

ಇವುಗಳ ಪರಿಣಾಮವಾಗಿ ಸಮಾಜದಲ್ಲಿ ಹಿಂಸಾಚಾರ, ವ್ಯಭಿಚಾರ, ಬಲಾತ್ಕಾರ ಹಾಗೂ ಇತರೇ ಅಪರಾಧಗಳ ಪ್ರವೃತ್ತಿ ಹೆಚ್ಚಾಗತೊಡಗಿದೆ. ಇದು ಮಾನವನನ್ನು ಅಪಾರ ಪಾತಾಳದಲ್ಲಿರುವಂತಹ ಪ್ರಪಾತದತ್ತ ಎಳೆದೊಯ್ಯುತ್ತಿರುವುದು ಸ್ಪಷ್ಟವಾಗಿ ಕಾಣುತ್ತಿದೆ.

ನಾವು ಇವುಗಳಿಂದ ರಕ್ಷಿಸಿಕೊಳ್ಳಬೇಕಾದರೆ ಭಾರತೀಯ ಸಂಸ್ಕೃತಿಯ ಮೂಲತತ್ವಗಳಾದ ಧರ್ಮ, ಪರಮಾತ್ಮನಲ್ಲಿ ನಂಬಿಕೆ, ದೇವರಲ್ಲಿ ವಿಶ್ವಾಸ, ಸದಾಚಾರ, ಸೇವಾ ಶೂಶ್ರೂಷೆಯನ್ನು ಎಲ್ಲರಿಗೂ ಮಾಡಿ ಸರ್ವೇ ಜನಾಃ ಸುಖಿನೋ ಭವಂತು ಎನ್ನುವ ತತ್ವವನ್ನು ಅಕ್ಷರಶಃ ಪಾಲಿಸುವುದು, ಪರೋಪಕಾರ ಮಾಡುವುದು, ಅಭ್ಯಾಗತರಿಗೆ ಸೇವೆ ಮಾಡುವುದು, ಅಲ್ಪ ಸಮಯದಲ್ಲಿ ಯಾವುದಾದರೊಂದು ರೀತಿಯಲ್ಲಿ ಅಪಾರ ಸಂಪತ್ತನ್ನು ಗಳಿಸುವ ಅಪರ ಮಾರ್ಗಗಳನ್ನು ಅನುಸರಿಸುವುದರಿಂದ ದೂರವಿರುವುದು - ಇತ್ಯಾದಿಯವುಗಳನ್ನು ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಜೀವನ ಚರ್ಯೆಯಲ್ಲಿ ಅಳವಡಿಸಿಕೊಂಡು, ಅವನ್ನೆ ಮುಖ್ಯ ಅಂಗಗಳನ್ನಾಗಿ ಮಾಡಿಕೊಳ್ಳುವುದು ವಿಹಿತ ಹಾಗೂ ಉಚಿತ.

ಆಗಲೇ ಪ್ರತಿ ಮಾನವನೂ ನಿಜ ಅರ್ಥದ ಸುಖಶಾಂತಿಗಳನ್ನು ಪಡೆದು, ಸಂತೋಷವನ್ನೂ ಹೊಂದುವನು. (ಸಾಧಾರ)

# ಮಾರ್ಗಶಿರ ಮಾಸದ ವ್ರತಗಳು

---ಜಿ. ಶ್ರೀಧರ್.

'ಮಾಸಾನಾಂ ಮಾರ್ಗಶೀರ್ಷೋಽಹಂ' ಎಂಬುದು ಗೀತೆಯಲ್ಲಿ ಶ್ರೀಕೃಷ್ಣ ಹೇಳುವ ಮಾತು. ಎಲ್ಲದರಲ್ಲಿಯೂ ಅತ್ಯಂತ ಶ್ರೇಷ್ಠವಾದದ್ದನ್ನು ಆಯಾ ವಿಷಯ ಜಾತಿಯಲ್ಲಿ ಭಗವಂತ ತನ್ನನ್ನು ಗುರುತಿಸಿಕೊಂಡಾಗ ಮಾರ್ಗಶಿರ ಮಾಸದ ಪ್ರಾಮುಖ್ಯವನ್ನು ಮನಗಾಣಬಹುದು. ಗೀತೆಯನ್ನು ಶ್ರೀಕೃಷ್ಣ ಅರ್ಜುನನಿಗೆ ಬೋಧಿಸಿದ್ದೂ ಈ ತಿಂಗಳಿನಲ್ಲಿಯೇ - ಶುದ್ಧ ಏಕಾದಶಿಯಂದು. ಹೀಗಾಗಿ ಗೀತಾ ಜಯಂತಿಯಂದು ಭಾರತಾದ್ಯಂತ ಆಚರಿಸುವ ಉತ್ಸವವೂ ಮಾರ್ಗಶಿರದಲ್ಲಿಯೇ.

ಮಾರ್ಗಶಿರ ಮಾಸ ವೈಷ್ಣವಾಲಯಗಳಲ್ಲಿ ಪ್ರಮುಖವಾದದ್ದು. ಈ ತಿಂಗಳಿನಲ್ಲಿ ಗೋದಾದೇವಿಯ ತಿರುಪ್ಪಾವೈಯನ್ನು ಪ್ರತಿದಿನವೂ ಪಾರಾಯಣ ಮಾಡುತ್ತಾರೆ. ಗೋದಾದೇವಿಯ ಪರಿಣಯೋತ್ಸವವನ್ನೂ ಆಚರಿಸುತ್ತಾರೆ. ಹೀಗಾಗಿ ಧನುರ್ಮಾಸ - ಮಾರ್ಗಳಿ ಮಾಸ ವ್ರತಕ್ಕೆ ಹೆಸರಾದದ್ದು. ಮಾರ್ಗಳಿ ಮಾಸ - ಮಾರ್ಗಶಿರವನ್ನು ದಾಟಿ ಪುಷ್ಯಮಾಸದಲ್ಲೂ ಮುಂದುವರೆಯುತ್ತದೆ ಎಂಬುದನ್ನು ನೆನಪಿನಲ್ಲಿಡಬೇಕು.

ಭಗವಂತನ ಆರಾಧನೆಯ ಮೂಲತತ್ತ್ವ ವ್ರತಗಳಲ್ಲಿ ಇರುತ್ತದೆ. ಮಾನವನ ಮನಸ್ಸು ಭಗವಂತನಲ್ಲಿ ಕೇಂದ್ರೀಕೃತವಾಗುವುದರಿಂದ, ಸಾಮಾಜಿಕ ಬೌದ್ಧಿಕತೆ ಪ್ರಬುದ್ಧವಾಗುತ್ತದೆ. ಮಾಸಗಳನ್ನು ಅನುಸರಿಸಿ ವಿಷ್ಣುವಿಗೆ ಹೆಸರುಗಳು ಇರುವಂತೆ, ಲಕ್ಷ್ಮೀದೇವಿಗೆ ಇದೇ ಅನುಕ್ರಮವಾಗಿ ಹೆಸರುಗಳು ಇರುತ್ತದೆ. ಪದ್ಮಾ ನಾರಾಯಣಿ, ಧೃತೀ, ಸ್ಮೃತಿ, ಪುಷ್ಟಿ, ತುಷ್ಟಿ ಸಿದ್ಧಿ, ಶ್ರೀ ಲಕ್ಷ್ಮಿ ಕಮಲಾ, ಕ್ಷಮಾ ಮತ್ತು ಸಂಪತ್ತು ಎಂಬ ಹೆಸರುಗಳು ಚೈತ್ರಾದಿ ಮಾಸಕ್ರಮಗಳಿಂದ ಉಂಟಾಗಿದೆ. ಮಾರ್ಗಶಿರ ಮಾಸಕ್ಕೆ 'ಶ್ರೀ' ಎಂಬ ನಾಮವು ಸಲ್ಲುತ್ತದೆ.

ಮಾರ್ಗಶಿರ ಮಾಸದ ಶುಕ್ಲ ಪಾಡ್ಯದಂದು "ಧನ್ಯವ್ರತ" ಆಚರಿಸಲಾಗುವುದು. ಮಹಾಪುರಾಣ ಪ್ರಕಾರ ದಾರಿದ್ರ್ಯವನ್ನು ಹೋಗಾಲಾಡಿಸುವಂತೆ ಪ್ರಾರ್ಥಿಸಿ, ದೈವವನ್ನು ವೈಶ್ವಾನರ ರೂಪದಲ್ಲಿ ಆರಾಧಿಸಲಾಗುವುದು.

ಶುದ್ಧ ಬಿದಿಗೆಯಂದು ಪಿತೃದೇವತೆಗಳನ್ನು ಆರಾಧಿಸಿ, ಪೂಜಿಸಬೇಕೆಂದು ಲಿಂಗ ಪುರಾಣದಲ್ಲಿ ತಿಳಿಸಲಾಗಿದೆ. "ಕೃಚ್ಛ್ರಚತುರ್ಥೀ" ವ್ರತ ಇರುತ್ತದೆ. ಇದು ಶುದ್ಧ ಚೌತಿಯಂದು ಪ್ರಾರಂಭಿಸಿ, ಒಂದು ವರ್ಷಾಂತ್ಯ ನಡೆಸುವ ವ್ರತವಾಗಿದೆ. ಇದೇ ಚತುರ್ಥಿಯಲ್ಲಿ "ವರಚತುರ್ಥಿ" ಎಂಬ ವ್ರತವನ್ನು ನಡೆಯಿಸಿ, ಇಷ್ಟಾರ್ಥ ಸಿದ್ಧಿ ಪಡೆಯಬಹುದೆಂದು ಸ್ಕಾಂದಪುರಾಣದಲ್ಲಿ ತಿಳಿಸಲಾಗಿದೆ.

ಶುದ್ಧ ಪಂಚಮಿಯಂದು, ಶ್ರಾವಣ ಪಂಚಮಿ ರೀತ್ಯಾ ನಡೆಸುವ ನಾಗಪೂಜೆ ವ್ರತವನ್ನು ಇದೇ ದಿನದಂದು ಆಚರಿಸುವ ಪದ್ಧತಿ ಇದೆ. ಪಂಚಮಿಯಂದು ಗಣಪತಿ ಪೂಜಾ, ಮಾತೃಕಾ ಪೂಜಾ ನಾಂದಿ, ಕಲ್ಪೋಕ್ತ ಪೂಜಾ, ಸುವಾಸಿನೀ ಪೂಜಾ ಎಂಬ ಶ್ರೀ ಪಂಚಮಿ ವ್ರತಾಂಗಗಳ ಸಮೇತ ಆಚರಿಸುತ್ತಾರೆ.

ಲೋಕ ಕಂಟಕನೂ, ಪೀಡಕನೂ ಆಗಿದ್ದ ತಾರಕಾಸುರನನ್ನು ಸಂಹರಿಸಿ, ಸ್ವಾಮಿ ಕಾರ್ತಿಕೇಯನು ಪಟ್ಟಾಭಿಷಿಕ್ತನಾದ ಪವಿತ್ರ ದಿನವೇ ಮಾರ್ಗಶಿರ ಷಷ್ಠಿ ಸುಬ್ರಹ್ಮಣ್ಯನಿಗೆ ಅತಿ ಪ್ರಿಯವಾದ ಈ ದಿನ, ಈ ದೈವವನ್ನು ಕುಲದೈವ ಹೊಂದಿದ ಕುಟುಂಬದವರಿಗೆ ಹಬ್ಬದ ಆಚರಣೆ ಇರುತ್ತದೆ. ಭಯ, ಭಕ್ತಿ, ಶ್ರದ್ಧೆಯಿಂದ ವ್ರತವನ್ನು ಆಚರಿಸುತ್ತಾರೆ. ವಟುವನ್ನು ಕರೆದು ಆತನಲ್ಲಿ ಸುಬ್ರಹ್ಮಣ್ಯನನ್ನು ಆವಾಹನೆ ಮಾಡಿ, ವಿಶಿಷ್ಟ ಭೋಜನದಿಂದ ತೃಪ್ತಿ ಪಡಿಸಿ, ದಾನ - ಧರ್ಮ ಮಾಡುತ್ತಾರೆ.

ಶುದ್ಧ ಸಪ್ತಮಿಯಂದು, ಸೂರ್ಯ ಭಗವಾನ್ ಉಪಾಸನ ವ್ರತವನ್ನು ಆಚರಿಸುವ ಕಾರಣ, "ಮಿತ್ರ ಸಪ್ತಮಿ" ಎಂದು ಪ್ರಸಿದ್ಧಿಯಾಗಿದೆ. ಇದೇ ಸಪ್ತಮಿಯನ್ನು ಭದ್ರಾ ಸಪ್ತಮಿ, ನಂದಾ ಸಪ್ತಮಿ, ವಿಷ್ಣು ಸಪ್ತಮಿ ಎಂದು ಸಹ ಕರೆಯುತ್ತಾರೆ.

ಶುದ್ಧ ದಶಮಿಯನ್ನು ಪದಾರ್ಥದಶಮಿ ಎಂದು ಕರೆಯುತ್ತಾರೆ. ಕಾರ್ಯಸಿದ್ಧಿ ಪಡೆಯಲು ಇಂದ್ರಾದಿ, ದಿಕ್ಪಾಲರನ್ನು ಪ್ರಾರ್ಥಿಸುವುದರಿಂದ ಈ ಹೆಸರು ನಂಬಿಕೆಯಲ್ಲಿದೆ. ದಶಾದಿತ್ಯ ವ್ರತವನ್ನು ಈ ದಿನದಿಂದಲೇ ಆಚರಿಸುತ್ತಾರೆ.

ಶುದ್ಧ ಏಕಾದಶಿಯು "ಮೋಕ್ಷದಾ" ಎಂಬ ಹೆಸರಿನಿಂದಲೇ ಪ್ರಸಿದ್ಧವಾಗಿದೆ. ಭಕ್ತಿ, ಕರ್ಮ ಜ್ಞಾನಗಳನ್ನು ಒಳಗೊಂಡ ಭಗವದ್ಗೀತೆ ಅರ್ಜುನನಿಗೆ ಉಪದೇಶಿಸಿದ ದಿನವೇ ಇದಾಗಿದೆ. ಗೀತಾಪಾಠ, ಶ್ರವಣದಿಂದ ಕೃಷ್ಣಾರಾಧನೆಯನ್ನು ಮಾಡುತ್ತಾರೆ. ಶುಕ್ಲ ದ್ವಾದಶಿಯಂದು ಸೂರ್ಯ ಭಗವಾನ್ ಪೂಜೆಯನ್ನು ಮಾಡುವ "ದ್ವಾದಶಾದಿತ್ಯ ವ್ರತ" ಆಚರಣೆಯಲ್ಲಿದೆ. ಇದೇ ದಿನ ವಿಷ್ಣುವನ್ನು ವಿಶೇಷವಾಗಿ ಪೂಜಿಸುವ ಕಾರಣ, ವ್ಯಂಜನಾದ್ವಾದಶೀ, ಜನಾರ್ದನ ದ್ವಾದಶೀ ಎಂದು ಕರೆಯುತ್ತಾರೆ.

ಶುದ್ಧ ತ್ರಯೋದಶಿಯಂದು ಅನಂಗತ್ರಯೋದಶಿ, ಯಮಾದರ್ಶನಗಳೆಂಬ ವ್ರತಗಳನ್ನು ಆಚರಿಸುತ್ತಾರ. ಶುದ್ಧ ಚತುರ್ದಶಿಯಂದು "ಪಿಶಾಚ ವಿಮೋಚನಾ ಯಾತ್ರ" ಎಂಬ ಯಾತ್ರೆಯನ್ನು ಆಚರಿಸುವುದು. ಇದೇ ದಿನದಂದು ಶಿವ ಚತುರ್ದಶಿ ಎಂಬ ವ್ರತವು ಇರುತ್ತದೆ.

ಇನ್ನು ಕೃಷ್ಣಪಕ್ಷದ ಅಷ್ಟಮಿಯಂದು ಭೈರವೋಪಾಸಕರು ಮಧ್ಯಾಹ್ನದಿಂದ ವ್ರತವನ್ನು ಆಚರಿಸಿ, "ಶಿವೋಪಾಸನೆ" ಮಾಡುತ್ತಾರೆ. ಆದುದರಿಂದ ಇದನ್ನು "ಭೈರವಾಷ್ಟಮಿ" ಎಂದು ಕರೆಯುತ್ತಾರೆ. ಇದಕ್ಕೆ "ಕಲಾಷ್ಟಮಿ" ಎಂಬ ಹೆಸರು ಇದೆ.

ಮುರನೆಂಬ ರಾಕ್ಷಸನು ಸ್ವರ್ಗಕ್ಕೆ ಧಾಳಿಯಿರಿಸಿ, ಕೋಲಾಹಲವೆಬ್ಬಿಸಿದಾಗ, ಶಿವನ ಮೂಲಕ ಶ್ರೀ ನಾರಾಯಣನನ್ನು ಪ್ರಾರ್ಥಿಸುತ್ತಾರೆ. ಆಗ ನಾರಾಯಣನ ದೇಹದಿಂದ ಸೃಷ್ಟಿಯಾದ ಸುಂದರ ಸ್ತ್ರೀ "ಉತ್ಪನ್ನಾ" - ಈ ರಾಕ್ಷಸನನ್ನು ವಶೀಕರಿಸಿಕೊಂಡು ಸಂಹರಿಸುತ್ತಾಳೆ. ವಿಷ್ಣುವಿನ ಅಂಶವಾದ ಈ ಉತ್ಪನ್ನಾ ದೇವತೆಯ ಅನುಗ್ರಹಕ್ಕಾಗಿ, ಇದೇ ಹೆಸರಿನ ವ್ರತವನ್ನು ಕೃಷ್ಣ ಏಕಾದಶೀಯಂದು ಆಚರಿಸುತ್ತಾರೆ.

ಅಮಾವಾಸ್ಯೆಯಂದು ಗೌರೀವ್ರತವನ್ನು ಆಚರಿಸುವ ಪದ್ಧತಿ ಸಹ ಇದೆ.



# ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯ

### ತಿರುಮಲೆ

## ಆರ್ಜಿತ ಸೇವಾ ವಿವರ



## ದೈನಂದಿನ ಸೇವೆಗಳು :

| ಸೇವೆ | ಶುಲ್ಕ | ಪ್ರವೇಶಾವಕಾಶಾಲ |
|---|---|---|
| 1. ಸುಪ್ರಭಾತದರ್ಶನ | ರೂ. 100/- ಒಬ್ಬರಿಗೆ | ಪ್ರಾ - 2-30 |
| 2. ತೋಮಾಲೆಸೇವೆ | ರೂ. 200/- ಒಬ್ಬರಿಗೆ | ಪ್ರಾ - 3-30 |
| 3. ಅರ್ಚನೆ | ರೂ. 200/- ಒಬ್ಬರಿಗೆ | ಪ್ರಾ - 4-30 |
| 4. ಶುಕ್ರವಾರಗಳಲ್ಲಿ ಅರ್ಚನೆ ಹಾಗೂ ತೋಮಾಲೆ ಸೇವೆಗಳು | ರೂ. 400/- ಒಬ್ಬರಿಗೆ | ಪ್ರಾ - 6-30 |
| 5. ಆ ಮಂತ್ರಣೋತ್ಸವ | | |
| ಶುಕ್ರವಾರಗಳ ಹೊರತು | ರೂ. 600/- ಒಬ್ಬರಿಗೆ | ಪ್ರಾ - 3-30 |
| ಶುಕ್ರವಾರಗಳಲ್ಲಿ | ರೂ. 600/- ಒಬ್ಬರಿಗೆ | ಪ್ರಾ - 6-30 |
| 6. ನಿಜಪಾದ ದರ್ಶನ | | |
| ಶುಕ್ರವಾರಗಳಲ್ಲಿ | ರೂ. 100/- ಒಬ್ಬರಿಗೆ | ಪ್ರಾ - 5-30 |
| 7. ವಿಶೇಷ ಪ್ರವೇಶ | ರೂ. 30/- ಒಬ್ಬರಿಗೆ | ಸರ್ವದರ್ಶನದ ವೇಳೆಯಲ್ಲಿ |
| 8. ಏಕಾಂತಸೇವೆ | ರೂ. 100/- ಒಬ್ಬರಿಗೆ | ರಾತ್ರಿ 10-30 ನಂತರ |

ಸೂಚನೆ :-- 1 ರಿಂದ 6 ರ ವರೆಗಿನ ಸೇವೆಗಳಿಗೆ 90 ದಿನಗಳ ವರೆಗೆ ಮೊದಲೇ ಮಿಾಸಲಾತಿ ಪಡೆಯಬಹುದು. ವಿಶೇಷ ಪ್ರವೇಶ, ಏಕಾಂತ ಸೇವೆಗಳಿಗೆ ಮುಂಗಡ ಕಾಯ್ದಿರಿಸುವಿಕೆಯಿಲ್ಲ. ಏಕಾಂತ ಸೇವೆಯ ಟಿಕೆಟ್‌ಗಳನ್ನು ರಾತ್ರಿ 10-30 ರ ನಂತರ ಸರ್ವದರ್ಶನಾನಂತರದ ಕಾಲಾವಕಾಶವನ್ನು ಅನುಸರಿಸಿ ನೀಡಲಾಗುವುದು.

## ಉತ್ಸವಗಳು :

1. ಕಲ್ಯಾಣೋತ್ಸವ - ರೂ. 2500/- ಬೆಳಗ್ಗೆ 10 ಗಂ|| 5 ಮಂದಿಗೆ ಪ್ರವೇಶ.
   ಬಹುಮಾನ : ಉತ್ತರೀಯ, ಕುಪ್ಪುಸದಕಣ, ದೊಡ್ಡ ಲಾಡು-5, ಅಪ್ಪ-5, ವಡೆ-5, ದೋಸೆ-5, ಸಿಹಿ ಪೊಂಗಲು, ಪೊಂಗಲು, ಪುಳಿಯೋಗರೆ, ದಧ್ಯೋದನ $\frac{1}{16}$ ಸೋಲ.
2. ಪ್ರತ್ಯೇಕ ಕಲ್ಯಾಣೋತ್ಸವ- ರೂ. 750/- ಬೆಳಗ್ಗೆ 10 ಗಂ|| ಇಬ್ಬರಿಗೆ ಪ್ರವೇಶ.
   ಬಹುಮಾನ : ಉತ್ತರೀಯ, ಕುಪ್ಪುಸದಕಣ; ಲಾಡು-1, ವಡೆ-1.
3. ಆರ್ಜಿತ ಬ್ರಹ್ಮೋತ್ಸವ ರೂ. 500/- ದಿನಕ್ಕೆ ಮಧ್ಯಾಹ್ನ 1 ಗಂ|| 5 ಮಂದಿಗೆ ಪ್ರವೇಶ.
   ವಾಹನಗಳು - ದೊಡ್ಡ ಶೇಷವಾಹನ, ಬೆಳ್ಳಿಯ ಗರುಡವಾಹನ, ಬೆಳ್ಳಿಯ ಹನುಮಂತವಾಹನ.
4. ಡೋಲೋತ್ಸವ (ಊಂಜಲ್‌ಸೇವೆ) ರೂ. 750/- ಮಧ್ಯಾಹ್ನ - 1-30 ಗಂ|| 6 ಮಂದಿಗೆ ಪ್ರವೇಶ.
   ಮುಕುರಮಂಟಪದಲ್ಲಿ ನಡೆಯುವ ಈ ಸೇವೆಯಲ್ಲಿ ಶೇಷವಸ್ತ್ರ ಬಹುಮಾನವಿದೆ.
5. ವಸಂತೋತ್ಸವ : ರೂ. 3000/- ದಿನಕ್ಕೆ ಮಧ್ಯಾಹ್ನ - 2 ಗಂ|| 10 ಮಂದಿಗೆ ಪ್ರವೇಶ.
   ಬಹುಮಾನ: ವಸ್ತ್ರ, ವಡೆ-6, ದೋಸೆ-20, ದಧ್ಯೋದನ, ಪುಳಿಯೋಗರೆ, ಪೊಂಗಲ್, ಸಿಹಿಪೊಂಗಲ್.
6. ಸಹಸ್ರ ದೀಪಾಲಂಕಾರ : ರೂ. 500/- ಸಂಜೆ - 5-30 ಗಂ||, ಈ ಸೇವೆ ಆಲಯದ ಹೊರಗೆ ನಡೆಯುತ್ತದೆ. ಸೇವೆಯನಂತರ ವೈಕುಂಠದ ಮೂಲಕ 5 ಮಂದಿಗೆ ದರ್ಶನಾವಕಾಶ. ಬಹುಮಾನ - ವಸ್ತ್ರ.

ಸೂಚನೆ: 1ರಿಂದ 6 ರ ವರೆಗೆ ಎಲ್ಲ ಸೇವೆಗಳಿಗೂ ಮುಂಗಡ ಕಾಯ್ದಿರಿಸುವಿಕ 90 ದಿನಗಳ ಮೊದಲು ಮಾಡಬಹುದು.

## ವಾರ ಸೇವೆಗಳು - ಉತ್ಸವಗಳು

1. ವಿಶೇಷ ಪೂಜೆ - (ಸೋಮವಾರಗಳಲ್ಲಿ) ರೂ. 3000/- ಬೆಳಗ್ಗೆ 6-00 ಗಂ|| 5 ಮಂದಿಗೆ ಪ್ರವೇಶ.
   ಬಹುಮಾನ - ವಸ್ತ್ರ - ದೊಡ್ಡ ಲಾಡು-5, ವಡೆ-5.
2. ಅಷ್ಟದಳ ಪಾದ ಪದ್ಮಾರಾಧನೆ - (ಮಂಗಳವಾರಗಳಲ್ಲಿ) ರೂ. 3500/- ಬೆಳಗ್ಗೆ - 5-30 ಗಂ||, 5ಮಂದಿಗೆ ಪ್ರವೇಶ.
   ಬಹುಮಾನ : ವಸ್ತ್ರ ದೊಡ್ಡಲಾಡು-10, ವಡೆ-10.

3. ಸಹಸ್ರ ಕಲಶಾಭಿಷೇಕ (ಬುಧವಾರಗಳಲ್ಲಿ) ರೂ. 5000/- ಬೆಳಗ್ಗೆ- 5-30 ಗಂ||, 6 ಮಂದಿಗೆ ಪ್ರವೇಶ.

ಬಹುಮಾನ : ವಸ್ತ್ರ, ದೊಡ್ಡಲಾಡು-7, ವಡೆ-7, ದೋಸೆ-5, ಅಪ್ಪ-5, ದಧ್ಯೋದನ, ಪುಳಿಯೋಗರೆ, ಪೊಂಗಲ್, ಸಿಹಿಪೊಂಗಲ್, ಪಾಯಸ, $\frac{1}{32}$ ಸೋಲ.

4. ತಿರುಪ್ಪಾವಡಾ (ಗುರುವಾರಗಳಲ್ಲಿ) ರೂ. 5000/- ಬೆಳಗ್ಗೆ - 5-30 ಗಂ|| 6 ಮಂದಿಗೆ ಪ್ರವೇಶ.

ಬಹುಮಾನ : ವಸ್ತ್ರ, ದೊಡ್ಡಲಾಡು 7, ವಡೆ - 7, ಅಪ್ಪ-5, ದೋಸೆ-5, ತೆನೆತೊಳೆ-5, ಜಿಲೇಬಿ-5, ಪುಳಿಯೋಗರೆ, ಪಾಯಸ - $\frac{1}{32}$ ಸೋಲ.

5. ಅಭಿಷೇಕ (ಶುಕ್ರವಾರಗಳಲ್ಲಿ) ಬೆಳಗ್ಗೆ - 3-30 ಗಂ||

ಪೂರಾಭಿಷೇಕ - ರೂ. 750/- ಒಬ್ಬರಿಗೆ, ಬಹುಮಾನ - 2 ಚಿಕ್ಕಲಾಡು, 2 ವಡೆ.

ಪುನುಗುಬಟ್ಟಲು - ರೂ. 300/- ಒಬ್ಬರಿಗೆ, ಬಹುಮಾನ - 1 ಚಿಕ್ಕಲಾಡು, 1 ವಡೆ.

ಕಸ್ತೂರಿ ಬಟ್ಟಲು - ರೂ. 150/- ಒಬ್ಬರಿಗೆ, ಬಹುಮಾನ - 1 ಚಿಕ್ಕ ಲಾಡು, 1 ವಡೆ.

ಸೂಚನೆ :– 1 ರಿಂದ 4 ರ ವರೆಗೆ 90 ದಿನಗಳ ಮೊದಲು ಮುಂಗಡ ಕಾಯ್ದಿರಿಸುವ ಅವಕಾಶವುಂಟು. ಅಭಿಷೇಕದ ಮುಂಗಡ ಕಾಯ್ದಿರಿಸುವಿಕೆಯನ್ನು ಒಂದು ವರ್ಷದ ಮೊದಲು ಟಿಕೆಟ್‌ಗಳು ದೊರೆಯುವ ಅವಕಾಶ ವಿದ್ದಲ್ಲಿ ಅಂಗೀಕರಿಸಲಾಗುವುದು.

## ವಾರ್ಷಿಕ ಸೇವೆಗಳು

1. ಪವಿತ್ರೋತ್ಸವ : ರೂ. 7500/- ಮೂರು ದಿನಗಳ ಉತ್ಸವ. ಸಾಮಾನ್ಯವಾಗಿ ಆಗಸ್ಟ್ ತಿಂಗಳಿನಲ್ಲಿ ನಡೆಯುತ್ತದೆ. ಉತ್ಸವ ಕಾಲದಲ್ಲಿ ಐದುಮಂದಿಗೆ ಪ್ರವೇಶ. ಒಂದು ದಿನ ಮಾತ್ರ ಆಲಯದ ಅನುಕೂಲಕ್ಕೆ ತಕ್ಕಂತೆ ತೋಮಾಲೆಸೇವೆ ಹಾಗು ಅರ್ಚನೆಗೆ ಇಬ್ಬರನ್ನು ಅನುಮತಿಸಲಾಗುವುದು.

   ಬಹುಮಾನ : 2 ಹಾಗೂ 3 ನೇ ದಿನಗಳು - 30 ದೋಸೆ, ಪೊಂಗಲು, 3ನೇ ದಿನ - 6 ವಡೆ - ವಸ್ತ್ರ.

2. ಪುಷ್ಪಯಾಗ : ರೂ. 3500/- ಒಂದು ದಿನ. ಬೆಳಗ್ಗೆ 6 ಗಂಟೆಗೆ. ವಾರ್ಷಿಕ ಬ್ರಹ್ಮೋತ್ಸವದ ನಂತರದ ಶ್ರವಣ ನಕ್ಷತ್ರದ ದಿನ ನಡೆಯುವುದು. 5 ಮಂದಿಗೆ ಪ್ರವೇಶ.

   ಬಹುಮಾನ : ವಸ್ತ್ರ, ಉತ್ತರೀಯ, ದೊಡ್ಡಲಾಡು 1, ವಡೆ - 1.

3. ಪ್ಲವೋತ್ಸವ : ರೂ. 2500/- ಒಂದು ದಿನಕ್ಕೆ. ಸಂಜೆ 6 ಗಂಟೆಗೆ, ಸಾಮಾನ್ಯವಾಗಿ ಫೆಬ್ರವರಿ ಮಾರ್ಚ್‌ನಲ್ಲಿ ಐದು ದಿನ ನಡೆಯುವ ಉತ್ಸವ. 5 ಮಂದಿಗೆ ಪ್ರವೇಶ.

   ಬಹುಮಾನ : ಉತ್ತರೀಯ ಹಾಗೂ ಕುಪ್ಪುಸದ ಕಣ.

4. ಪದ್ಮಾವತೀ ಪರಿಣಯ : ರೂ. 5000/- ದಿನಕ್ಕೆ. ಮಧ್ಯಾಹ್ನ - 3 ಗಂಟೆಗೆ, ಸಾಮಾನ್ಯವಾಗಿ ಪ್ರತಿವರ್ಷ ಜೂನ್ ತಿಂಗಳಿನಲ್ಲಿ ಮೂರುದಿನ ನಡೆಯುತ್ತದೆ. 5 ಮಂದಿಗೆ ಪ್ರವೇಶ.

   ಬಹುಮಾನ : ವಸ್ತ್ರ, ಕುಪ್ಪುಸದ ಕಣ, ಲಾಡು 5, ವಡೆ 5.

5. ಅಭಿಧ್ಯೇಕ ಅಭಿಷೇಕ : ರೂ. 2000/- ದಿನಕ್ಕೆ. ಬೆಳಗ್ಗೆ - 8 ಗಂಟೆಗೆ - ಪ್ರತಿವರ್ಷ ಸಾಮಾನ್ಯವಾಗಿ ಜೂನ್ ತಿಂಗಳಿನಲ್ಲಿ ನಡೆಯುತ್ತದೆ. 5 ಮಂದಿಗೆ ಪ್ರವೇಶ.

   ಬಹುಮಾನ : ಉತ್ತರೀಯ, ಕುಪ್ಪುಸದಕಣ, ಲಾಡು 1, ವಡೆ 1.

6. ಪುಷ್ಪ ಪಲ್ಲಕ್ಕಿ : ರೂ. 1000/- ಸಂಜೆ 5-30 ಗಂಟೆಗೆ. ಆನಿವರ ಆಸ್ಥಾನದ ದಿನದ ಸಂಜೆ ನಡೆಯುತ್ತದೆ. ಸಾಮಾನ್ಯವಾಗಿ ಪ್ರತಿವರ್ಷ ಜುಲೈ ತಿಂಗಳಿನಲ್ಲಿ. 5 ಮಂದಿಗೆ ಪ್ರವೇಶ.

   ಬಹುಮಾನ : ಉತ್ತರೀಯ - ಕುಪ್ಪುಸದ ಕಣ, ಲಾಡು-1, ವಡೆ-1.

7. ಕೋಯಿಲ್ ಆಳ್ವಾರ್ ತಿರುಮಂಜನ : ರೂ. 3000/- ಬೆಳಗ್ಗೆ - 11 ಗಂಟೆಗೆ. ವರ್ಷದಲ್ಲಿ ನಾಲ್ಕು ಬಾರಿ ಮಂಗಳವಾರಗಳಲ್ಲಿ, ಉಗಾದಿ, ಆನಿವರ ಆಸ್ಥಾನ, ಬ್ರಹ್ಮೋತ್ಸವ, ವೈಕುಂಠ ಏಕಾದಶಿಗಳ ಮೊದಲು ನಡೆಯುತ್ತದೆ. 10 ಮಂದಿಗೆ ಪ್ರವೇಶ.

   ಬಹುಮಾನ : ವಸ್ತ್ರ, ಲಾಡು 15, ವಡೆ 15, ಅಪ್ಪ 10, ದೋಸೆ 10 ಹಾಗೂ ಅನ್ನಪ್ರಸಾದ.

ಸೂಚನೆ :– ಎಲ್ಲ ವಾರ್ಷಿಕ ಉತ್ಸವಗಳಿಗೂ ಅವಕಾಶ ಇದ್ದಂತೆ ಮುಂಗಡವಾಗಿ ಕಾಯ್ದಿರಿಸಲಾಗುವುದು.

## ಅನ್ನಪ್ರಸಾದಗಳು :

ಕೆಳಕಂಡ ಅನ್ನಪ್ರಸಾದಗಳ ನಿವೇದನೆಗಾಗಿ ಶುಲ್ಕವನ್ನು ಅಂಗೀಕರಿಸಲಾಗುತ್ತದೆ. ಪ್ರತಿಯೊಂದರ $\frac{1}{4}$ ಸೋಲವನ್ನು ನೀಡಲಾಗುವುದು.

1. ದಧ್ಯೋದನ - ರೂ. 100/-
2. ಪುಳಿಯೋಗರೆ - ರೂ. 200/-
3. ಪೊಂಗಲ್ - ರೂ. 225/-
4. ಸಕ್ಕರೆ ಪೊಂಗಲ್ - ರೂ. 250/-
5. ಶಾಕರಬಾತ್ - ರೂ. 250/-
6. ಸೀರಾ - ರೂ. 450/-
7. ಪಾಯಸ - ರೂ. 225/-

## ಲಾಡು ಪಡಿ :

ದೊಡ್ಡ ಲಾಡು ಪಡಿ - ರೂ. 2500/-

ಕಿರಿಯ ಲಾಡು ಪಡಿ - ರೂ. 750/-

ಒಂದು ಟಿಕೆಟ್ ಪಡೆದಲ್ಲಿ ಐದು ಮಂದಿಗೆ ಪ್ರವೇಶಾವಕಾಶ. ದರ್ಶನಾನಂತರ 30 ಲಾಡುವನ್ನು ನೀಡಲಾಗುವುದು.

## ಇತರ ವಾರ್ಷಿಕ ಯೋಜನೆಗಳು :

1. ಉದಯಾಸ್ತಮಾನ ಸರ್ವ ಸೇವಾ ಯೋಜನೆ :

   ಶುಕ್ರವಾರದ ಹೊರತು ಇತರ ಯಾವುದೇ ದಿನದಲ್ಲಿ ಸೇವೆಗೆ ದತ್ತಿ ರೂ. 1 ಲಕ್ಷ

   ಶುಕ್ರವಾರಗಳ ಸೇವೆಗೆ ದತ್ತಿ ರೂ. 3 ಲಕ್ಷ

   ದತ್ತಿ ನೀಡಿದವರನ್ನು (ಒಟ್ಟಿ ಆರು ಮಂದಿ) ಸುಪ್ರಭಾತದಿಂದ ಏಕಾಂತಸೇವೆಯ ವರೆಗೆ ಎಲ್ಲ ಸೇವೆಗಳಿಗೂ ಅನುಮತಿಸಲಾಗುವುದು. ಆ ದಿನದ ಇತರ ಎಲ್ಲ ಆರ್ಜಿತ ಸೇವೆಗಳನ್ನೂ ನೋಡಲು ಅವಕಾಶ ನೀಡಲಾಗುವುದು.

   ಬಹುಮಾನ : ಒಂದು ಕಲ್ಯಾಣೋತ್ಸವ ವಸ್ತ್ರ, 25 ಲಾಡು, 5 ವಡೆ (ಪ್ರತಿವರ್ಷ).

2. ಬಾಲಾಜೀ ಅರ್ಚನಾಯೋಜನೆ : ಈ ಯೋಜನೆಗೆ ನೀಡಬೇಕಾದ ದತ್ತಿ ರೂ. 6000/-

   ದತ್ತಿ ನೀಡುವವರ ಹೆಸರಿನಲ್ಲಿ ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ ಅರ್ಚನೆಯನ್ನು ಮಾಡಲಾಗುವುದು. ದತ್ತಿ ನೀಡುವವರು ಅರ್ಚನೆಯ ದಿನವನ್ನು ಆಯ್ಕೆ ಮಾಡಿಕೊಳ್ಳಬಹುದು. ಯಾವುದೇ ವರ್ಷದಲ್ಲಿ ಈ ಆಯ್ಕೆಯ ದಿನ ಶುಕ್ರವಾರ ಬಂದರೆ ಮಾರನೆಯ ದಿಕ್ಕೆ ಅನುಮತಿಸಲಾಗುವುದು.

ಸೌಲಭ್ಯ : ದತ್ತಿ ನೀಡಿದವರಿಗೆ ಅರ್ಚನೆಯ ದಿನದಂದು ಉಚಿತ ವಸತಿ ನೀಡಲಾಗುವುದು. ಮೂರು ಮಂದಿಯನ್ನು ಅರ್ಚನೆಗೆ ಅನುಮತಿಸಲಾಗುವುದು. ಸುಪ್ರಭಾತಸೇವೆ ಹಾಗು ವಿಶೇಷ ಪ್ರವೇಶದಲ್ಲಿ ಮೂರು ಮಂದಿಯನ್ನು ಅನುಮತಿ ಸಲಾಗುವುದು.

ಬಹುಮಾನ : ಉತ್ತರೀಯ, ಕುಪ್ಪುಸದಕಣ, ಒಂದು ಕಿರಿಯ ಲಾಡು, ಒಂದು ವಡೆ.

## ಸಾಮಾನ್ಯ ಸೂಚನೆಗಳು

1. ಸೇವೆ ಉತ್ಸವಗಳನ್ನು ಮಾಡಿಸಲು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಹಣದ ಡಿ. ಡಿ. ಯನ್ನು ಪಡೆದು ಸೇವೆ, ಉತ್ಸವದ ಅಭ್ಯರ್ಥನ ಪತ್ರದೊಡನೆ ಪೇಷ್ಕಾರ್, ಶ್ರೀ ತಿರುಮಲೆ ದೇವಾಲಯ ತಿರುಮಲೆ 517 504 ಇವರಿಗೆ ಆಯಾ ಸೇವೆಗಳಲ್ಲಿ ಸೂಚಿಸಿರುವಂತೆ ಸಾಕಷ್ಟು ಮೊದಲು ಕಳುಹಿಸಬೇಕು. ಮುಂಗಡ ಕಾಯ್ದಿರಿಸುವಿಕೆಯನ್ನು ಅವಕಾಶವಿದ್ದಂತೆ ಏರ್ಪಡಿಸಿ, ಭಕ್ತರ ವಿಳಾಸಗಳಿಗೆ ಶೀಘ್ರವಾಗಿ ಖಚಿತ ಪತ್ರವನ್ನು ಕಳುಹಿಸಲಾಗುವುದು.
2. ಕಾಟೇಜುಗಳ ಮುಂಗಡ ಕಾಯ್ದಿರಿಸುವಿಕೆಗಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಪಡೆದ ಡಿ.ಡಿ. ಯನ್ನು ಮೂವತ್ತು ದಿನಗಳ ಮೊದಲು ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ ರಿಸೆಪ್ಷನ್ I ತಿ.ತಿ.ದೇ. ತಿರುಮಲೆ 517 504 ಇವರಿಗೆ ಕಳುಹಿಸಿ ಮುಂಗಡ ಪತ್ರವನ್ನು ಪಡೆಯಬೇಕು.
3. ಹೆಚ್ಚಿನ ವಿವರಗಳಿಗಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ 517 501 ಇವರನ್ನು ವಿಚಾರಿಸಿ. ಸೇವೆ ಉತ್ಸವ ವಿವರಗಳಿಗಾಗಿ ಪೇಷ್ಕಾರ್, ತಿರುಮಲೆ ದೇವಾಲಯ ತಿರುಮಲೆ 517 504 ಇವರಲ್ಲಿ ವಿಚಾರಿಸಿ.
4. ಎಲ್ಲ ಸೇವೆ ಉತ್ಸವಗಳಿಗೂ ಪ್ರವೇಶಾವಕಾಶ ವೈಕುಂಠಂ, ಕ್ಯೂ ಕಾಂಪ್ಲೆಕ್ಸಿನಿಂದ ಮಾತ್ರವೇ.

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇವಸ್ಥಾನಗಳು, ತಿರುಪತಿ.



## ಮೊದಲ ಮಾತು

ವೈಷ್ಣವ ಜಗತ್ತಿನಲ್ಲಿ ಸುಪ್ರಸಿದ್ಧವಾದುದು ತಿರುಪ್ಪಾವೈ, ಶ್ರೀಗೀತೆ; ಪಾರಮಾರ್ಥಿಕ ಪ್ರಣಯ ಗೀತೆ; ವೈರಾಗ್ಯದಲ್ಲಿ ಪ್ರಪತ್ತಿಯಲ್ಲಿ ಪರ್ಯವಸಾನವಾಗುವ ದೈವಿಕ ಶೃಂಗಾರ ಪ್ರಧಾನವಾದ ರಸವತ್ಕೃತಿ. ಸ್ವಾಪದೇಶಾರ್ಥ ದೃಷ್ಟಿಯಲ್ಲಿ ಪರಮ ಭಗವದ್ಭಾಗವತ ಸುಪ್ರಭಾತ ಪದ್ಯಾವಳಿ. ಶ್ರುತಿಶತ ಶಿರಸ್ಸಿದ್ಧ ಸಾರವಾಗಿರುವ ಶ್ರೀ ಗೋದೋಪನಿಷತ್, ಮನಮೋಹಕವಾದ ಇಪ್ಪತ್ತನಾಲ್ಕು ರಾಗಗಳಲ್ಲಿ, ನಾಲ್ಕು ತಾಳಗಳಲ್ಲಿ ಪ್ರಾಸ ಬದ್ಧವಾಗಿ ತಮಿಳಿನಲ್ಲಿ ಮೈವೆತ್ತಿದೆ. ಭಕ್ತಿಗೆ ಹೆಸರಾಂತ ನಾಲ್ಕು ತಾಳಗಳಲ್ಲಿ ಪ್ರಾಸಬದ್ಧವಾಗಿ ತಮಿಳಿನಲ್ಲಿ ಮೈವೆತ್ತಿದೆ. ಭಕ್ತಿಗೆ ಹೆಸರಾಂತ ಬಿಲಹರಿ ರಾಗದಿಂದ ಮೊದಲುಗೊಂಡು ಸುರಟಿಯಲ್ಲಿ ಮುಕ್ತಾಯವಾಗುವ ಗಾನ ಸುಧೆ, ಇವರಲ್ಲಿ ಚೆಂದಮಿಳಿನ ಮೂವತ್ತು ಪಾಶುರಗಳು ಅಡಕವಾಗಿವೆ.

ಈ ರಸೋತ್ಕರ್ಷ ಕೃತಿಯನ್ನು, ಭಾವಾಭಿವ್ಯಕ್ತ ಗೀತೆಯನ್ನು, ಮನಮರುಗಿ ದನಿಗರಗಿ ಹಾಡಿರುವ ಕವಯಿತ್ರಿ ದ್ವಾದಶ ವೈಷ್ಣವ ಆಳ್ವಾರರುಗಳಲ್ಲಿ ಮುಖ್ಯಳಾದ ಭಾಗವತೋತ್ತಮೆ ಆಂಡಾಳ್; ಶ್ರೀವಿಲ್ಲಿಪುತ್ತೂರಿನ ವಿಷ್ಣುಚಿತ್ತರ ಸಾಕುಮಗಳು; ಅಯೋನಿಜೆ - ಸೀತೆಯಂತೆ, ಕೇವಲ ಬಾಲ್ಯಾವಸ್ಥೆಯಲ್ಲಿಯೇ ಪರಿಪಕ್ವಜ್ಞಾನನಿಧಿಯಾಗಿ "ಪಿಂಜಾಯ್ ಪಳುತ್ತಾಳ್" ಎಂಬ ಪ್ರಶಸ್ತಿಗೆ ಪಾತ್ರಳಾದವಳು. ಭಕ್ತಿ ಜ್ಞಾನ ವೈರಾಗ್ಯಗಳ ತ್ರಿವೇಣೀ ಸಂಗಮವೇ ಆಕೆಯ ಜೀವನ ರಹಸ್ಯ. ಅವಳಿಗೆ ಐಹಿಕ ಸುಖಾದಿಗಳಲ್ಲಿ ಎಷ್ಟು ವಿರಕ್ತಿಯೋ ಪರಮ ವೈರಾಗ್ಯದಲ್ಲಿಯೂ ಅಷ್ಟೇ ಆಸಕ್ತಿ, ಮದುವೆಯ ವಯಸ್ಸು ಬಂದಾಗ, "ಮಾನಿಡವರ್ಕ್ಕೆನ್ರು ಪೇಚ್ಚುಪ್ಪಡಿಲ್ ವಾಳಹಿಲ್ಲೇನ್" -ತನ್ನನ್ನು ಮಾನವ ಮಾತ್ರನಿಗೆ ಕೊಟ್ಟು ಮದುವೆ ಮಾಡಿಸುವುದಾದರೆ ಬಾಳೇಕೆ, ಬದುಕೇಕೆ ಎಂದು ಪ್ರತಿಜ್ಞೆ ಮಾಡಿಬಿಟ್ಟಳು. ಇದು ಯಾವ ಭೀಷ್ಮಪ್ರತಿಜ್ಞೆಗೂ ಕಡಮೆಯಾದುದಲ್ಲ. ಆಂಡಾಳ್‌ಕಾಮವು ಮಾನವ ಕಾಮವಲ್ಲ; ದೇವ ಕಾಮ. "ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ" ಎಂಬಂತೆ ತನ್ನ ತವರೂರಾದ ಶ್ರೀವಿಲ್ಲಿಪುತ್ತೂರು ಸ್ವರ್ಗಕ್ಕಿಂತ ಮಿಗಿಲು; ಅಲ್ಲಿಯ ವಟಪತ್ರಶಾಯಿ ರಂಗನಾಥನೇ ತನ್ನ ಪತಿ ದೈವ; ಅವನ ಸಾನ್ನಿಧ್ಯದಲ್ಲಿ ಲೀನಳಾಗಬೇಕೆಂಬ ಪರಮಕಾತರ - ಪೇರಾಸೆ. ಕೋಲನ್ನರಸಿ ಓಡುವ ವಾಂಗುದಿಯಂತೆ ಅವಳ ಮಾನಸಹಂಸ "ಮಾಲ್‌ತೇಡಿ ಓಡುಂ" - ಶ್ರೀ ಕೃಷ್ಣನನ್ನೇ ಕಾಡಿ ದೇಡಿ ಅರಸಿಕೊಂಡು ಓಡುವುದು. ಮಿಕ್ಕ ಆಳ್ವಾರುಗಳು ಭಗವತ್ಪ್ರೇಮವನ್ನು ಸಾಧಿಸಲು ತಾವು ಹೆಣ್ಣೆಂದು ಭಾವಿಸಿಕೊಂಡು ದೈವಿಕ ಪ್ರಯಣ ಗೀತೆಗಳನ್ನು ಹಾಡಿದರು; ಪರಮಾತ್ಮ ಸಾಕ್ಷಾತ್ಕಾರವನ್ನು ಸಾಧಿಸಿದರು. ಇವೇ ನಾಲ್ಕು ಸಾವಿರ ದಿವ್ಯ ಪ್ರಬಂಧಗಳು. ಆಂಡಾಳಿಗೆ ಮಾತ್ರ ಈ ಕಾಲ್ಪನಿಕ ಭಾವಪರಾವರ್ತನೆಯ ಆವಶ್ಯಕತೆ ಬೇಕಾಗಲಿಲ್ಲ. ತಾನು ಸ್ವಭಾವತಃ ಸ್ತ್ರೀ, ನಿರುಪಾಯಿನಿಯಾದರೂ ಶ್ರೀಹರಿ ಪ್ರೇಮೋನ್ಮಾದದಲ್ಲಿ ಮೈಮರೆತು ಸಾಕ್ಷಾನ್ಮಥನಿಗೆ ಮನ್ಮಥನಾದ ಶ್ರೀ ಕೃಷ್ಣನನ್ನು ಬಯಸಿ, ಶಂಖ ಚಕ್ರ ಪಾಣಿಯಾದ ವೇಂಕಟಾದ್ರಿ ವಾಸನೊಡನೆ ತನ್ನನ್ನು ಸೇರಿಸಿಬಿಡೆಂದು ಕಾಮದೇವನನ್ನು ಅಂಗಲಾಚಿ ಬೇಡಿಕೊಂಡಳು. ೧೪೩ ಪಾಶುರಗಳುಳ್ಳ ತನ್ನ "ನಾಚ್ಚಿಯಾರ್ ತಿರುಮೊಳಿ" ಯಲ್ಲಿ ಪ್ರಾಸ ರಾಗ ತಾಳ ಲಯ ಬದ್ಧವಾದ ಛಂದಸ್ಸಿನಲ್ಲಿ ಹಾಡಿ, ಮಾರ್ಗಶೀರ್ಷ ವ್ರತಾಚರಣೆಗಾಗಿ ತಿರುಪ್ಪಾವೈ ಗೀತೆಯನ್ನು ರಚಿಸಿದಳು. ಈ ಭಗವತ್ಸೇವೆಗೂ, "ಮಹಾಜನೋ ಯೇನ ಗತಸ್ಸ ಪಂಥಾಃ" ಎಂಬಂತೆ ಹಿರಿಯರು ಮೆಟ್ಟಿದ ಮಾರ್ಗದಲ್ಲಿಯೇ ಮುಂದುವರಿದಳು. ಭಾಗವತದಲ್ಲಿ ನಿರೂಪಿಸಿರುವ ಧರ್ಮಕ್ಕೆ ಅವಿರೋಧವಾಗಿರುವ ಮಧುರಭಾವದಿಂದ ಶ್ರೀಕೃಷ್ಣನ ಕೃಪಾವಲೋಕನಕ್ಕೆ ಪಾತ್ರಳಾದವಳು. "ಧರ್ಮಾಽವಿರುದ್ಧೋ ಭೂತೇಷು ಕಾಮೋಽಸ್ಮಿಭರತರ್ಷಭ" ಎಂಬ ನುಡಿ ಮುತ್ತಿನ ಮೋಡಿಯನ್ನರಿತವಳಲ್ಲವೇ ಆಂಡಾಳ್?

# ಸಿರಿನೋಂಪಿ

---ಕಡಬಂ ದೊರೆಸ್ವಾಮಿ ಅಯ್ಯಂಗಾರ್ಯ.

ಆಂಡಾಳ್ ಅರ್ಥಾತ್ ಗೋದಾದೇವಿ; ತನ್ನ ವ್ರತಕ್ಕೆ ಮಾರ್ಗಶೀರ್ಷ ಮಾಸವನ್ನೇಕೆ ಆರಿಸಿಕೊಂಡಳು? ಅವಳ ಉಪಾಸ್ಯ ದೇವನಾದ ಶ್ರೀಕೃಷ್ಣನೇ, ಗೀತಾಚಾರ್ಯನೇ - ಬೃಹತ್ಸಾಮ ಕಥಾನಾಮ್ನಾಮ್ ಗಾಯತ್ರೀ ಛಂದಸಾಂ ಮಾಸಾನಾಂ ಮಾರ್ಗಶೀರ್ಷೋಽಸ್ಮಿ ಋತೂನಾಂ ಕುಸುಮಾಕರಃ" ಎಂದು ಉಪದೇಶಿಸಿದ್ದಾನೆ. ಅಂದಮೇಲೆ ಮಾರ್ಗಶೀರ್ಷ ಮಾಸವು ಶ್ರೀಕೃಷ್ಣಮಾಸ, ವಿಷ್ಣುಮಾಸ, ಕೇಶವ ಮಾಸ, ಗೋದೆಯ ವ್ರತಾಚರಣೆಯ ಈ ಮಾಸದ ಔಚಿತ್ಯಕ್ಕೆ ಹಿನ್ನೆಲೆಯೆಂದು ಹೇಳುವುದಾದರೆ ಭಾಗವತದಲ್ಲಿ ಉಕ್ತವಾಗಿರುವ ಹೇಮಂತ ಮಾಸದ ಕಾತ್ಯಾಯನೀ ವ್ರತ.

ಶುಕಬ್ರಹ್ಮ ಪ್ರಣೀತವಾದ ರಾಸಕ್ರೀಡೆಯಲ್ಲಿ ಗೋಪಿಯರು ಶ್ರೀಕೃಷ್ಣನೊಡನೆ ಆಟವಾಡತೊಡಗಿ, ಹೀಗೆ ತಮ್ಮ ತನುಮನಗಳನ್ನು ಮರೆತು ಕಣ್ಣೆಟ್ಟಕಡೆ ತಮ್ಮ ವಲ್ಲಭನನ್ನು ಕಂಡು ಮೋಹಪರವಶರಾಗಿ ಪರಮಾತ್ಮಸಾಕ್ಷಾತ್ಕಾರದ ಆನಂದವನ್ನು ಅನುಭವಿಸಿದರೋ, ಹಾಗೆಯೇ ಆಂಡಾಳ್ ತನ್ನ ತಿರುಪ್ಪಾವೈ ಪದ್ಯಮಾಲಿಕೆಯ ಐದನೆಯ ಪಾಶುರದಲ್ಲಿ ("ಮಾಯನ್ನೈ ಮನ್ನು ವಡಮದುರೈ ಮೈಂದನ್ನೈ") ಮಧುರ ನಾಯಿಕಾ ಭಾವಾವೇಶದಲ್ಲಿ ಮಗ್ನಳಾಗಿ ಶ್ರೀಕೃಷ್ಣನನ್ನು ಮಾಯಾಮಯ, ಆಶ್ಚರ್ಯಗುಣಚೇಷ್ಟಿತ, ಅಪ್ರಕಂಪ್ಯೋತ್ತರ ಮಧುರಾನಾಯಕ, ಗೋಕುಲ ಮಣಿದೀಪ, ವಾಚಾಮಗೋಚರ -ಎಂದು ಮನಗರಗಿ ಹೊಗಳಿ ಹಾಡಿ ಭಗವತ್ಪ್ರೇಮ - ಸಾಗರದಲ್ಲಿ ಮುಳುಗಿ ಹೋಗಿದ್ದಾಳೆ.

"ತಿರುಪ್ಪಾವೈ"ಯ ೨೧ ರಿಂದ ೨೬ನೇ ಪಾಶುರಗಳಲ್ಲಿ ಆಂಡಾಳ್ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಸುವರ್ಣರೇಖೆಯಂತಿರುವ, ಆರು ಅಂಗಗಳುಳ್ಳ ಶರಣಾಗತಿ ಅಥವಾ ಪ್ರಪತ್ತಿ ಮಾರ್ಗವನ್ನು ಸೂಚಿಸಿದ್ದಾಳೆ. ಇದು ಭಕ್ತಿಮಾರ್ಗಕ್ಕಿಂತ ಮಿಗಿಲಾದುದು, ಸುಲಭವಾದುದು. ಈ ಮಾರ್ಗಕ್ಕೆ ತಮಿಳಿನಲ್ಲಿ "ಅಡೈಕ್ಕಲಮ್" ಎಂಬ ಹೆಸರಿದೆ. ಇದು ವೈಷ್ಣವ ಸಿದ್ಧಾಂತ ರೀತಿಯಾಗಿ ವೇದಾಂತ ದೇಶಿಕರವರ ಅಭಯಪ್ರದಾನಸಾರ; ಶೈವ ಸಿದ್ಧಾಂತದಲ್ಲಿಯೂ ಮಾಣಿಕ್ಯವಾಚಕರವರ ತಿರುವಾಚಕದಲ್ಲಿ ಈ ಮಾರ್ಗವನ್ನು ಕಾಣಬಹುದು. ಆಂಡಾಳ್ "ನಾರಾಯಣನೇ ನಮಕ್ಕೇ ಪರೈತರುವಾನ್" ಎಂದು ನಂಬಿದ್ದು, ತನ್ನ ತಿರುಪ್ಪಾವೈಯ ಕಡೆಯ ಪದ್ಯದಲ್ಲಿ ಇಷ್ಟಾರ್ಥ ಸಾಧನೆಯಾಯಿತೆಂಬ ಸಂತೃಪ್ತಿಯನ್ನು ಸಾರಿದ್ದಾಳೆ.

ಹಲವಾರು ನಿಗೂಢ ತತ್ವೋಪದೇಶಕ ಗ್ರಂಥವೆಂದರೆ ತಿರುಪ್ಪಾವೈ-- "ಹ್ರಸ್ವ - ಮಧುರ - ಗಂಭೀರ ಎಂಬೀ ಗುಣತ್ರಯವುಳ್ಳ ತ್ರಿವೇಣೀ ಸಂಗಮ. ಇದು ಜಗತ್ತಿನ ಜನ ಮೆಚ್ಚುವಂತೆ ಉದ್ಬೋಧನೆ ಪ್ರಕೃತಿ ವರ್ಣನೆ ವ್ಯಕ್ತಿವರ್ಣನೆ ಫಲಪ್ರಾಪ್ತಿಯ ಭರವಸೆಗಳ ಆಕರ; ಚಿದಚಿದೀಶ್ವರ ತತ್ವತ್ರಯೋಪದೇಶಕ ಪ್ರಪನ್ನಗೀತೆ."

**ಸಂಸ್ಕೃತ ಹಾಗೂ ತಮಿಳ ವೇಂದಾಂತಗಳೆರಡೂ ಹಾಸು ಹೊಕ್ಕಾಗಿ ಕಲೆತಿರುವ ಉಭಯ ವೇದಾಂತ ಮಾರ್ಗಾನುಸಾರಿಣಿ ಆಂಡಾಳ್. ಇವಳ ತಿರುಪ್ಪಾವೈ ವ್ರಜಜನಾನಂದಗೀತೆ. ತಿರುಪ್ಪಾವೈನ ಕನ್ನಡ ಅನುವಾದವನ್ನಿಲ್ಲಿ ಪ್ರಸ್ತುತ ಪಡಿಸಲಾಗಿದೆ ಸಿರಿನೋಂಪಿ - ಶ್ರೀವ್ರತ ಎಂಬ ಅರ್ಥವುಳ್ಳ ಈ ಮೂವತ್ತು ಪಾಶುರಗಳ ತಾತ್ಪರ್ಯವನ್ನೂ ನೀಡಲಾಗಿದೆ.**

# ತಿರುಪ್ಪಾವೈ

---ಕನ್ನಡಾನುವಾದ: ಕಡಬಂ ದೊರೆಸ್ವಾಮಿ ಅಯ್ಯಂಗಾರ್ಯ.

## ಮುಕ್ತಕ ಪದ್ಯಗಳು :

ಉತ್ತುಂಗ ಕುಚಗಿರಿಯ ತಪ್ಪಲೊಳು ಪವಡಿಸಿಹ
ಕೃಷ್ಣನನು ಎಚ್ಚರಿಸಿ ವೇದ ವೇದಾಂತ ಶತ
ಸೂಕ್ತಿಗಳನನುಸರಿಸಿ ನಿಜಕಾರ್ಯತಂತ್ರವ ನಿರ್ಣಯಿಸಿ ತಾಂ ಮುಡಿದ
ಮಾಲೆಯಿಂದಿನಿಯನನು ಸೆರೆಗೈದ ಸಿರಿವಿಲ್ಲಿ
ಪುತ್ತೂರ ವರ ವಿಷ್ಣುಚಿತ್ತ ಸುತೆ ಆ ಮುಕ್ತ
ಮಾಲ್ಯದೆಗೆ ಭಕ್ತಿಯಿಂದನವರತ ಸಲಿಸುವೆನು ವಂದನೆಯ -೧-

ಕಳನಿಗಳೊಳರಸಂಚೆ ನಲಿಮಲಿವ ಪೊಸಪೊಳಲ
ಸಿರಿವಿಲ್ಲಿಪುತ್ತೂರ ವರವಿಷ್ಣು ಚಿತ್ತಸುತೆ
ವಿರಚಿಸಿದ ಶೃಂಗಾರದಿಂಚರದ ಸಿರಿನೋಂಪಿ
ಪದ್ಯಗಳ ಮಿಗೆ ಮೆಚ್ಚಿ ನೆನೆ ಮನವೆ ಕೊಂಡಾಡಿ -೨-

ಮುಡಿದ ಪೂಮಾಲೆಗಳ ನೀಡಿ ಪಾಮಾಲೆಗಳ
ಪಾಡಿ ಪೊಂಜೊಡರ ಲತೆಯಂಥ ಕಂಕಣಾ
ಲಂಕೃತಳೆ ಕರುಣೆಸ್ವೈ ವೆಂಕಟೇಶ್ವರ ನೆನಗೆ
ಪತಿಯೆಂಬ ನಲ್ನುಡಿಯ ಮಾರದೊಲು ನಮಗಿಂದು -೩-

ಕರ್ಕಟಕ ಪೂರ್ವ ಫಲ್ಗುನಿ ತಾರೆ
ಮಿನುಗುತಿರೆ ಪಾಂಡ್ಯದೊಳು ತುಳಸಿವನ
ಸಂಜಾತೆ ಶ್ರೀರಂಗಪತಿ ದಯಿತೆ
ಗೋದೆಗಿದೊ ಸಲಿಸುವೆವು ನಮನಗಳ -೪-



## ಸಿರಿನೋಂಪಿ

ಮಾರ್ಗಶಿರ ಮಾಸದೊಳು ತುಂಬುಪೆರೆ ತಾನೆಸೆಯೆ
ಆಭರಣ ಸಂತಸದ ಸಿರಿಮೆರೆವ ಗೋಕುಲದ
ಕನ್ನೆಯರೆ ನೀರಾಟವಾಡಲ್ಕೆ ಬನ್ನಿರೈ
ಕೂರಲಗ ಪಿಡಿದೆತ್ತಿ ದುಷ್ಟರನು ಸದೆಬಡಿದ
ನಂದಸುತ ನಾಯತನಯನೆ ಯಶೋದೆಯ ಕಂದ
ಶಿಶುಸಿಂಹ, ಕಾರ್ಮೋಡದಂತೆಸೆವ ಘನರೂಪ
ಕಮಲಾಕ್ಷ ಶಶಿಸೂರ್ಯ ನಿಭವದನ ನಾರಣನೆ
ನೀಡುವನು ಪರೆಯೊಂದ ಜಗಮೆಚ್ಚುವಂದದೊಳು ನಮಗಿಂದು -೧-



ಸಖಿಯರೆ; ನೀವೆಲ್ಲ ಉಟ್ಟು ತೊಟ್ಟು ಎಳೆಯ ಪ್ರಾಯದ ಚೆಲುವೆಯರು. ಇದೀಗ ಧನುರ್ಮಾಸ, ಹುಣ್ಣಿಮೆಯ ಶುಭದಿನ, ಯಮನಾ ತೀರ್ಥದಲ್ಲಿ ಮಿಂದು ನನ್ನೊಡನೆ ವ್ರತವನ್ನಾಚರಿಸಲು ನಿಮಗೆಲ್ಲ ಆಸೆ ಇದೆ; ನನಗೆ ಗೊತ್ತು. ದುಷ್ಟ ಶಿಕ್ಷಣಕ್ಕಾಗಿ ವೇಲಾಯುಧವನ್ನು ಹಿಡಿದ ನಂದಗೋಪನ ಪುತ್ರ ಶ್ರೀಕೃಷ್ಣ ಅಲ್ಲಿದ್ದಾನೆ. ಪದ್ಮದಳಾಯತಾಕ್ಷಿ ಯಶೋದೆಯ ಮುದ್ದುಕಂದ, ನೀಲಮೇಘಶ್ಯಾಮ, ಸೂರ್ಯ ಚಂದ್ರರಂತೆ ಅವನ ಮುಖ ಬೆಳಗುತ್ತಿದೆ. ಸಿಂಹ ಕಿಶೋರದಂತೆ ಧೀರ. ಸರ್ವಸ್ವಾತ್ವರನಾದ ಶ್ರೀಮನ್ನಾರಾಯಣನೇ ಅವನು. ಶರಣಾಗತ ವಾತ್ಸಲ್ಯಸಾರನಿಧಿ, ನಮ್ಮ ವ್ರತ ಸಾಂಗವಾಗಿ ನೆರವೇರಿದರೆ ನಮಗೊಂದು ಪರೆಯನ್ನು ಕೊಡುವನಂತೆ. ಆಗ ನಾವು ಕೃತಾರ್ಥರಾಗುತ್ತೇವೆ. ಜನವೆಲ್ಲ ನಮ್ಮನ್ನು ಕೊಂಡಾಡುತ್ತಾರೆ. ಬೇಗನೆ ಬನ್ನಿ; ಕಾಲವಿಳಂಬ ಬೇಡ ಎಂದು ಆಂಡಾಳ್ ಗೋಪಕನ್ಯೆಯರನ್ನು ವ್ರತಾಚರಣೆಗಾಗಿ ಕರೆಯುತ್ತಿದ್ದಾಳೆ ಈ ಪದ್ಯದಲ್ಲಿ.

ಭುವಿಯ ಭಾಗ್ಯವತಿಯರೆ ಕೇಳಿರೈ; ಕೈಗೊಂಡ
ನೋಂಪಿಗನುಗುಣವಾದ ಪರಿಕರಂಗಳ ವಿವರಿಪೆನು
ಪಾಲ್ಗಡಲ ಮೇಲಡರಿ ಪಟ್ಟಿರುವ ಪರಮನನು
ಪೊಗಳುತ್ತ ನಸುಕಿನಲಿ ನೀರ್ಮಿಂದು ಹಾಲ್ತುಪ್ಪ
ವುಣ್ಣದಿರೆ, ಕಂಗಳಿಗೆ ಕಪ್ಪಿಡದೆ, ಪೂದಂಡೆ
ಮುಡಿಯದಿರೆ, ಕೀಳೆಸಕ ವೆಸಗದಿರೆ, ಕೆಡೆವಾತ
ನುಡಿಯದಿರೆ, ಅತಿಥಿಗಳ ಸತ್ಕರಿಸಿ ಬಾಳ್ಸವಿಯ
ಗುಟ್ಟರಿತು ಬಾಳುವೆವು ವ್ರತಫಲವು ಸಿದ್ಧಿಪುದು ನಮಗಿಂದು -೨-



**ಈ ಭೂಮಂಡಲದಲ್ಲಿ ಉಜ್ಜೀವಿಸಲು ಬಂದಿರುವ ಭಾಗ್ಯವತಿಯರಾದ ಮುಮುಕ್ಷುಗಳೆ; ಶ್ರೀಮನ್ನಾರಾಯಣನು ವ್ರತನಿಷ್ಠರಾದ** ನಮಗೆ ನಮ್ಮ ಇಷ್ಟಾರ್ಥವನ್ನು ನೆರವೇರಿಸಿಕೊಡುವುದಾಗಿ ಮಾತುಕೊಟ್ಟಿದ್ದಾನೆ. ಅಮೃತಸಾಗರದಲ್ಲಿ ಶೇಷಶಯನದ ಮೇಲೆ ಬಹು ಜಾಗರೂಕತೆಯಿಂದ ಪವಡಿಸಿರುವ ಅವನ ಪಾದಪದ್ಮಗಳನ್ನು ಕುರಿತು ನಾವೆಲ್ಲರೂ ಹಾಡೋಣ. ವ್ರತಶೀಲರಾದಾಗ ನಾವು ಹಾಲುತುಪ್ಪ ಸೇವಿಸದೆ, ಕಣ್ಣಿಗೆ ಕಪ್ಪಿಡದೆ, ತಲೆಗೆ ಹೂಮುಡಿಯದೆ, ಕೆಟ್ಟ ಮಾತಾಡದೆ ಕೆಟ್ಟ ಕೆಲಸ ಮಾಡದೆ - ಈ ಆರು ಪ್ರಾಕೃತ ಭೋಗಗಳನ್ನು ತ್ಯಜಿಸೋಣ, ನಾವು ಹೀಗೆ ಸೊರಗಿದರೆ ಅವನು ನಮಗಾಗಿ ಮರುಗುವನು. ನಸುಕಿನಲ್ಲಿ ಸ್ನಾನ, ಶ್ರೀಪಾದಪದ್ಮಗಳ ಸಂಕೀರ್ತನೆ, ದೀನರಿಗೆ ಅಳವಿದ್ದಷ್ಟು ದಾನ, ಆತ್ಮೋಜ್ಜೀವನಕ್ಕಾಗಿ ಚಿಂತನೆ ಹಾಗೂ ಅತಿಥಿಸತ್ಕಾರ ಎಂಬೀ ಆರು ಕೈಂಕರ್ಯಗಳನ್ನು ಆಚರಿಸೋಣ. ಈ ಕೃತ್ಯಾಕೃತ್ಯ ವಿವೇಕಜ್ಞಾನ ಅನುಷ್ಠಾನವೇ ಶರಣಾಗತಿಗೆ, ಪ್ರಪತ್ತಿಗೆ ಸಿದ್ಧೋಪಾಯ. ಆದಕಾರಣ ಸಖಿಯರೆ; ನಮ್ಮ ವ್ರತಾಚರಣೆಗಾಗಿ ಸಿದ್ಧರಾಗಿ ಬೇಗ ಬನ್ನಿರೆಂದು ಕರೆಯುತ್ತಿದ್ದಾಳೆ ವಿಷ್ಣುಚಿತ್ತ ಕುಲನಂದನಕಲ್ಪವಲ್ಲಿ ಗೋದಾದೇವಿ.



ನಿಡಿದಾಗಿ ಅಡಿನೀಡಿ ಈರೇಳು ಲೋಕಗಳ
ತಾನಳೆದ ಉತ್ತಮನ ಪೆಸರೆತ್ತಿ ಕೊಂಡಾಡಿ
ಕೈಗೊಂಡ ವ್ರತಕಾಗಿ ಮಜ್ಜನವ ನೆಸಗಿದೊಡೆ
ತಿಂಗಳಿಗೆ ಮಳೆ ಮೂರು ಸುರಿಯುತಿರೆ ತೊಲಗುವುದು
ದುರ್ಭಿಕ್ಷ; ಕಳನಿಗಳ ಜಲದೊಳಗೆ ಮರಿಮೀನು
ಸುಳಿಯುತಿರೆ, ಬಂಡುಂಡು ಕಣ್ಮುಚ್ಚಿ ಮೈಮರೆಯೆ
ಮಧುಕರನು ನೆಯ್ದಿಲೆಯ ಶಯ್ಯೆಯಲಿ; ಕೊಡವಾಲ
ಕರೆಯುವುವು ಧೇನುಗಳು, ವ್ರತಫಲವು ಸಿದ್ಧಿಪುದು ನಮಗಿಂದು -೩-

ಗಗನವನ್ನು ಮುತ್ತಿಡುವಂತೆ ಉನ್ನತವಾಗಿ ಬೆಳೆದು, ಮೂಲೋಕಗಳನ್ನು ತನ್ನ ಸಿರಿಯಡಿಗಳಿಂದ ಅಳೆದ ಪುರುಷೋತ್ತಮನೆ ತ್ರಿವಿಕ್ರಮ. ಅಹಿಂಸೆಗೆ ಹೆಸರಾದವನು. ಇವನನ್ನು ಕುರಿತು ಹೆಸರೆತ್ತಿ ಹಾಡಿ ವ್ರತಸ್ನಾನ ಮಾಡಿದರೆ ನಾಡಿನ ಕ್ಷಾಮ ತೊಲಗುತ್ತದೆ. ವಾಮನನು ತ್ರಿವಿಕ್ರಮನಾದಂತೆ ಕುರುಚಲು ಪೈರುಗಳೂ ಹುಲುಸಾಗಿ ಬೆಳೆಯುತ್ತವೆ. ತಿಂಗಳಿಗೆ ಮಳೆ ಮೂರು ಸುರಿಯುತ್ತವೆ. ಬತ್ತದ ಪೈರುಗಳ ನಡುವೆ ಮರಿಮೀನುಗಳು ಆನಂದವಾಗಿ ಸುಳಿದಾಡುತ್ತವೆ. ಅರಳಿದ ನೈದಿಲೆ ಹೂವುಗಳಿಂದ ಮಕರಂದವನ್ನು ಹೀರಿ ದುಂಬಿಗಳು ಮೈಮರೆತು ಮಲಗಿ ಬಿಡುತ್ತವೆ. ಬಿಣ್ಗೆಚ್ಚಲಿನ ಗೋವುಗಳು ಕೊಡದ ತುಂಬ ಹಾಲು ಕರೆಯುತ್ತವೆ. ಗೋಧನವು ಹೀಗೆ ನಾಡಿನಲ್ಲಿ ನಲಿಯುತ್ತಿದ್ದರೆ, ನಾವು ಕೈಗೊಂಡ ವ್ರತವು ಸಾಂಗವಾಗಿ ಸಿದ್ಧಿಸುತ್ತದೆ. ಗೋಪಕನ್ನೆಯರೆ ತಳುವದಿರೆ ಬನ್ನಿ ಎಂದು ತನ್ನ ಗೆಳೆತಿಯರನ್ನು ಕೊರಲೆತ್ತಿ ಕರೆಯುತ್ತಿದ್ದಾಳೆ ಬಹುಗುಣರಮಣೀಮಣಿ ಆಂಡಾಳ್.

ಸುಳಿಮಳೆಗೆ ನೀನಣ್ಣ, ನಡೆಗೆಡವೆ ನೀರಧಿಯ
ನೀರ್ಮೊಗೆದು ಕಲ್ಪಾಂತ ಜೀಮೂತ ಮಾಲೆಯನು
ಜಗದಾದಿ ಮೂಲಂಗೆ ಸರಿಯೆನಿಸಿ, ನೀಲಮಣಿ
ಕಾಂತಿಯಿಂ ಪರಿಯೆಚ್ಚ ಚಕ್ರದೊಲು ತನಿಗಿಡಿಯ
ಮಿಂಚೊದರಿ ಬಲಮುರಿಯ ಶಂಖದೊಲು ಘೂರ್ಣಿಸುತ
ಸಿರಿವರನ ಬಿಲ್ಲೊವೆದ ಸರಲ್ಮಳೆ ಗೆಣೆಯಿನಿಸಿ
ಸುರಿಸುವುದು ಬಲ್ಸರಿಯ; ನಸುಕಿನೊಳೆ ನೀರ್ಮಿಂದು
ಸಂತಸವ ಸವಿಯುವೆವು, ವ್ರತಫಲವು ಸಿದ್ಧಿಪುದು ನಮಗಿಂದು -೪-



ಈ ಪದ್ಯದಲ್ಲಿ ಶ್ರೀವಿಲ್ಲಿಪುತ್ತೂರಿನ ಆಂಡಾಳ್ ತನ್ನ ಗೆಳೆತಿಯರೊಡಗೂಡಿ ಹೀಗೆಂದು ಪ್ರಾರ್ಥಿಸುತ್ತಾಳೆ.

ಚಕ್ರಾಕಾರವಾಗಿ ಸುತ್ತಿ ಸುತ್ತಿ ಸುರಿಯುವ ಜಡಿಮಳೆಗೆ ಅಧಿಪತಿಯಾದ ವರುಣದೇವನೇ; ನೀನು ನಮ್ಮ ಕೈಬಿಡಬೇಡ, ಉಪಕಾರ ಮಾಡು, ಸಮುದ್ರದೊಳಹೊಕ್ಕು ನೀರ್ಮೊಗೆದು ಗರ್ಜಿಸಿ ಗುಡುಗಿ ನೀರುಂಡ ಮುಗಿಲಂತೆ ಕಪ್ಪಾಗಿ ತೋರಿ, ಚಕ್ರದಂತೆ ಮಿಂಚೊದರಿ ಬಲಮುರಿ ಶಂಖದಂತೆ ತೊಳಗಿ ಮೊಳಗಿ, ಧಾರಾಕಾರವಾಗಿ ಮಳೆ ಸುರಿಸು. ನಾವು ಆಗ ಸಂತಸದಿಂದ ಮಾರ್ಗಶಿರಸ್ನಾನ ಮಾಡಲು ಅನುಕೂಲ. ನಮ್ಮ ವ್ರತವು ಸಾಂಗವಾಗಿ ನೆರವೇರಲನುವಾಗುತ್ತದೆ. ಮಳೆಯಿಲ್ಲದಿದ್ದರೆ ಇಳೆಯ ಕಾರ್ಯಗಳು ಕುಂಠಿತವಾಗುತ್ತವೆ. ನಾಡಿನ ಹಿತಬಯಸಿ, ಸರ್ವತ್ರ ಸುವೃಷ್ಟಿಗಾಗಿ ಈ ಪರ್ಜನ್ಯಸ್ತವವನ್ನು ದನಿಗರಗಿ ಹಾಡಿದ್ದಾಳೆ ಆಂಡಾಳ್.

ಅಚ್ಚರಿಯ ಶಿಶುವಾಗಿ ಅವತರಿಸಿ ಮಧುರೆಯೊಳು
ಪೂತಜಲ ಪೂರದಿಂ ಭೋರ್ಗರೆವ ಯಮುನೆಯಾ
ತೀರದೊಳು ವಿಹರಿಸುವ ಗೋಪಕುಲ ದೀಪನನು
ವಿಲಸನ್ನಿಜ ಜನನೀಗರ್ಭಸಂಭೂತನನು
ನೀರ್ಮಿಂದು ಪರಿಪೂತ ಪುಷ್ಪದಿಂದರ್ಚಿಸುತ
ದನಿಗರಗಿ ಪಾಡಲ್ಕೆ ಮನಮರುಗಿ ಬೇಡಲ್ಕೆ
ಪೂರ್ವಾಪರ ಪಾಪ ಪಾತಕರಾಶಿ ಸೀಯುವುದಗ್ನಿ
ಸೋಂಕಿದರಳೆವೊಲೆಮ್ಮ ವ್ರತಫಲವು ಸಿದ್ಧಿಪುದು ನಮಗಿಂದು -೫-

ಈ ಅಷ್ಟಪದಿಯ ಮೊದಲನೆಯ ನಾಲ್ಕು ಪಾದಗಳಲ್ಲಿ ಶ್ರೀಕೃಷ್ಣನ ಬಗೆಗೆ ವಿವರಗಳು ಅಡಕವಾಗಿವೆ. ಶ್ರೀಕೃಷ್ಣನು ಮಾಯಾಮಯ ಅಚ್ಚರಿಯ ಶಿಶು. ಉತ್ತರ ಮಧುರಾನಾಯಕ, ಎರಡು ಸಾರಿ ಸ್ನಾನ ಮಾಡಿದರೆ ಸಾಕು; ನಮ್ಮ ಪಾಪ ಪಂಕಿಲವು ಕಳೆದು ಹೋಗುವಂಥ ಯಮುನಾ ತೀರವಾಗಿ, ಗೋವಳಿಗರ ವಂಶದೀಪ, ಯಶೋದಾ ಗರ್ಭಾಂಬುಧಿ ಚಂದ್ರಮ - ಆಕೆಯ ಕೈಯಿಂದಲೇ ಸೊಂಟಕ್ಕೆ ಹಗ್ಗ ಕಟ್ಟಿಸಿಕೊಂಡ ಸರಳ ಲೀಲಾಲೋಲ ದಾಮೋದರ. ಇಂತಹ ಶ್ರೀಕೃಷ್ಣನನ್ನು ತ್ರಿಕರಣ ಶುದ್ಧಿಯಿಂದ ಪ್ರಾರ್ಥಿಸಿದರೆ ನಮ್ಮ ಪೂರ್ವಾಪರ ಪಾಪರಾಶಿಗಳೆಲ್ಲ ಅರಳೆಯರಾಶಿಗೆ ದೆಂಕಿ ತಗುಲಿದಂತೆ ಸುಟ್ಟು ಸೀಕರಿಯಾಗುತ್ತವೆ. ಗೆಳತಿಯರೆ ಬೇಗ ಬನ್ನಿ ಭಕ್ತಿ ಪ್ರಧಾನವಾದ ತೋಡಿ ರಾಗದಲ್ಲಿ ರೂಪಕ ತಾಳಾನುಸಾರ ದನಿಗರಗಿ ಹಾಡೋಣ. ಆಗ ಶ್ರೀಕೃಷ್ಣ ಮನಮರುಗಿ ಅನುಗ್ರಹಿಸುತ್ತಾರೆ. ನಮ್ಮ ವ್ರತವು ಸಿದ್ಧಿಸುತ್ತದೆ ಎಂದು ಭಕ್ತ ಜನ ವಾತ್ಸಲ್ಯಸಿಂಧು ಗೋದಾದೇವಿ ತನ್ನ ಸಖಿಯರನ್ನು ಯಮುನಾತೀರ್ಥಸ್ನಾನಕ್ಕಾಗಿ ಕರೆಯುತ್ತಾಳೆ.



ಪಕ್ಷಿಗಳ ಕಲರವವ ಪಕ್ಷಿರಥನಾಲಯದ
ಶುಭ ಶಂಖದಾರವವ ನಾಲಿಸಿಯು ನಿದ್ರಿಸುವೆ
ಎಳೆಗುವರಿ ನೀನೇಳು; ಪೂತನೆಯ ಮೊಲೆಯುಂಡು
ಕಪಟ ಶಕಟಾಸುರನ ಬಲವಳಿಯೆ ತಾನೊದೆದ
ಕ್ಷೀರಾಬ್ಧಿ ಶಯನನ ನಾದಿ ಬೀಜಾಕ್ಷರನ
ಮೆಲ್ಲನೆಚ್ಚರಿಸಿ ಮುನಿವರರು ಮೇಣ್ ಯೋಗಿಗಳು
ಹರಿಹರಿಯೆಂದುಚ್ಚರಿಪ ಕೀರ್ತನ ಸ್ವನವು
ನಿಜಮನಕೆ ತಣ್ಪೀಯೆ ವ್ರತಫಲವು ಸಿದ್ಧಿಪುದು ನಮಗಿಂದು -೬-

ಬೆಳಕು ಹರಿಯಿತು ಪಕ್ಷಿಗಳು ಚಿಲಿಪಿಲಿ ಗುಟ್ಟುತ್ತ ಸುಪ್ರಭಾತ ಹಾಡುತ್ತಿವೆ. ಪಕ್ಷಿವಾಹನನ ದೇಗುಲದಿಂದ ಶುಭ ಶಂಖಧ್ವನಿ ಕೇಳಿ ಬರುತ್ತಿದೆ. ಮೌನಿಗಳು ನಿಜಶಯನದಿಂದೆದ್ದು ಹರಿನಾಮಸಂಕೀರ್ತನೆ ಮಾಡುತ್ತಿದ್ದಾರೆ. ಅವರ ಕೊರಲಿಂಪು ನಮ್ಮ ಎದೆಯ ಹೃದಯತಾಪವನ್ನು ತಂಪಾಗಿಸುತ್ತಿದೆ. ವಿಷಸ್ತನ್ಯವುಣಿಸುವ ನೆಪದಿಂದ ಬಂದ ಪೂತನಿಯನ್ನು ನಿಗ್ರಹಿಸಿ, ಅವಳಿಗೆ ತಾಯ್ತನವನ್ನು ಅನುಗ್ರಹಿಸಿದವನು ನಮ್ಮ ಬಾಲಕೃಷ್ಣ, ತನ್ನ ಪಾದಸ್ಪರ್ಶ ಮಾತ್ರದಿಂದಲೇ ಕಪಟ ಶಕಟಾಸುರನನ್ನು ಭಂಜಿಸಿ ಅವನಿಗೆ ಮೋಕ್ಷವನ್ನಿತ್ತು, ರಿಪೂಣಾಮಪಿ ವತ್ಸಲಃ ಎಂಬ ಕೀರ್ತಿಗೆ ಏಕಭಾಜನನಾದ ಸಾಂದ್ರವಾತ್ಸಲ್ಯಸಾರಸಾಗರನಲ್ಲವೆ ನಮ್ಮ ಶ್ರೀಕೃಷ್ಣ. ತಾನು ಕ್ಷೀರಾರ್ಣವದಲ್ಲಿ ಶೇಷಶಾಯಿಯಾಗಿದ್ದರೂ ನಿಖಿಲ ಜಗತ್ಕರುಣಾರ್ಣವ. ಇಂಥ ಮಹಿಮಾನ್ವಿತನಾದವನಿಗೆ ನನ್ನ ತಂದೆ ವಿಷ್ಣುಚಿತ್ತರು ನಿಜ ಚಿತ್ತವನ್ನೆ ತೆತ್ತುಬಿಟ್ಟರು. ಗರುಡಾರೂಢನಾಗಿ, ಚಕ್ರಶಂಖಧಾರಿಯಾಗಿ,ಮೈದೋರಿದ ಶ್ರೀಮನ್ನಾರಾಯಣನಿಗೆ ದೃಷ್ಟಿದೋಷವೆಲ್ಲಿ ತಾಗುತ್ತದೆಯೋ ಎಂದು ಅಂಜಿ ಮೊತ್ತಮೊದಲು ಮಂಗಳಾಶಾಸನ ಮಾಡಿದವರು ಪೆರಿಯಾಳ್ವಾರರು. ಯೋಗಾರೂಢರಾಗಿದ್ದ ಅಂತಹವರನ್ನು ಎಚ್ಚರಗೊಳಿಸಿ ಕರೆದುಕೊಂಡು ಬಂದಿದ್ದೇನೆ. ಏನೂ ಅರಿಯದ ಬಾಲಿಕೆ, ನೀನೆನ್ನ ಜೀವದ ಗೆಳೆತಿ, ವ್ರತಸ್ನಾನಕ್ಕಾಗಿ ಹೋಗೋಣ ಎದ್ದು ಬಾ. ನಾನೊಬ್ಬಳೇ ಭಗವಂತನನನ್ನು ಸೇವಿಸು



# A HEALING TOUCH

## T. T. DEVASTHANAMS INTRODUCES
## SRI BALAJI AROGYAVARAPRASADINI SCHEME

For ages, Tirumala, the abode of Lord Venkateswara, has been a great centre of pilgrimage. Thousands of devotees visit the sacred hills every day and offer their solemn prayers to the Lord for their spiritual and physical well-being.

Alleviating human suffering has been a part of dedicated efforts of TTD to the mankind. TTD already manages a Leprosorium, centre for physically handicapped, a poor home and also a central hospital. To provide the most advanced medical technology to the needy, the TTD has launched another monument, a blessing from the Lord by opening Sri Venkateswara Institute of Medical Sciences -- a sophisticated super speciality centre on the lines of AIIMS of New Delhi & JIMPER of Pondicherry and PGI of Chandigarh. Total well being of man is the aim of Sri Venkateswara Institute of Medical Sciences, which apart from offering service, training and education in medical sciences, also encourages Research and development

The doors to such a state of the art technology should be open to our poor and disabled brethren.

With a view to achieving this, Sri Venkateswara Institute of Medical Sciences has introduced a New scheme Balaji Arogyavaraprasadini Scheme. To accomplish the goal of proving the sophisticated medical technology to every individual at an affordable rate, we invite the generous co-operation of philanthropists and the general public.

### The Scheme in essence:

A donor can make an endowment of Rs. 1000/- or multiples thereof / Rs. 1 lakh / Rs. 5 lakhs / Rs. 10 lakhs to T.T. Devasthanams which will in turn contribute matching grant. The entire amount will be deposited in fixed deposit in a nationalised Bank and the interest accrued on it will be utilised for providing free medical services to the poor and the needy.

A Chair in Sri Venkateswara Institute of Medical Sciences will be named after the donor who contributes Rs. 10 lakhs or above. These endowment chairs are purely research oriented.

- Donations can be made by any individual / family / company / firms etc.
- The name of the donor who endows Rs. 5 lakhs or more will be displayed prominently in the Reception hall of the hospital.
- The discharge ticket of the benefited patient will carry the name of the donor.

### Additional Benefit and facilities :

- Donations to Sri balaji Arogyavaraprasadini Scheme are exempted from Income Tax under 80 (G)
- Paid rooms / Air conditioned rooms will be allotted to family members of the donor in the hospital.
- Paid rooms can be named after donors who contribute a sum of Rs. 5 lakhs or above
- By paying Rs. 5 lakhs and above, a donor may sponsor one operation per year.
- Donors can sponsor feeding of the In-patients and out-patients They may also sponsor a travel fellowship for the faculty per year.

All donations, by D.Ds. drawn in favour of The Executive Officer, T.T. Devasthanams, Tirupati-517 501 (Andhra Pradesh) should reach the Director, Sri Venkateswara Institute of Medical Sciences, Tirupati along with the following particulars.

- Name and address along with the latest passport-size photographs of the family members of the donor who contributes Rs. 1 lakh or more.
- Name and address of the person to whom Income Tax Exemption Certificate is to be issued.

The donors are also welcome to offer equipment, vehicles etc. to SVIMS or even sponsor health camps in rural areas, if they so desire. Further details can be had from

**The Executive Officer**
**T.T. Devasthanams, Tirupati**
**or**
**The Director**
**Sri Venkateswara Institute of Medical Sciences, Tirupati**

**EXECUTIVE OFFICER**



'Bakasura Vadha' Alankaram in Sarva Bhupala Vahanam at Tirumala



Sri Abhayanjaneya Swami, Tirupati.

TIRUMALA TIRUPATI DEVASTHANAMS

# Sri Venkateswara Vanabhivriddhi Scheme

## An Appeal . . .

*He that planteth a tree is the servant of God*
*And Provideth a kindness for many generation*
*And faces that he, hath not seen shall bless him*

Sacred Forests of Tirumala are the precious gift of Lord Venkateswara to mankind. With a view to safeguarding its unique yet delicate ecological condition, Tirumala Tirupati Devasthanams have introduced a series of exciting schemes called **Sri Venkateswara Vanabhivriddhi Schemes.** The Schemes seek to provide a rare opportunity to the public for participation in a massive plantation project implemented by the Forest Department of T.T. Devasthanams.

The salient features of Sri Venkateswara Vanabhivriddhi Schemes are:

**VRIKSHA SAMVARDHANAM :** Under this Scheme, about one acre of land will be brought under plantation.

**Benefits :**

- Plantation will be named after the donor or person of his choice.
- Every year free accommodation on 2 ordinary days at Tirumala for 10 years.
- One paid special darshan every year for 5 persons for 10 years

**Donation :** Rs. 15,000.

**VRIKSHA PRASADAM :** The Scheme is proposed for raising 100 fruit and flowering seedling every year.

**Benefits :**

- Distribution of one hundred seedlings, both fruit bearing and flowering in the donor's name every year.
- Two days free stay at Tirumala every year on any ordinary days for 10 years.
- One paid special darshan every year for five persons for 10 years.

**Donation :** Rs. 10,000.

**SMARAKA VANALU :** Under this scheme 10 saplings of selected species will be planted in a grove and maintained for five years.

**Benefits :**

- The grove will be named after the donor.
- Every year paid special darshan for five persons for five years.

**Donation :** Rs. 2,000.

**VANA SAMRAKSHANA BHAGA SWAMYAM :** is proposed to protect and improve the natural forest cover on Tirumala hills.

**Benefits :**

- Diplay of the donor's name.
- Paid special darshan for five persons for one year.

**Donation :** Rs. 1,000.

**ADHYAYANA VANALU :** Plantation and maintenance of a variety of species will be taken up under this scheme in the proposed botonical garden at Tirumala.

**Benefits :**

- Display of donor's name near the plant.

**Donation :** Rs. 500.

**VRIKSHA DATTATA :** is a bold scheme featuring adoption and plantation of avenue trees on the ghat road and at Tirumala.

**Benefits :**

- Display of donor's name.

**Donation :** Rs. 250.

We appeal to all devotees to donate liberally and help us to preserve the priceless forest wealth of Tirmala - The Abode of LORD VENKATESWARA.

Please send your donations by Demand draft to the **The Executive Officer, T. T. Devasthanams, TIRUPATI - 517 507.**

EXECUTIVE OFFICER

ವುದಕ್ಕಿಂತ ನಿನ್ನಂತಹ ಭಕ್ತ ವೃಂದದೊಡಗೂಡಿ ಸೇವಿಸುವುದು ಬಲು ಒಪ್ಪು, ಸಹನಾವವತು ಸಹಸೌಭುನಕ್ತು - ಈ ಮಾತಿನ ರಹಸ್ಯ ನಿನಗೆ ಗೊತ್ತಿಲ್ಲವಲ್ಲ ಅಯ್ಯೋ ಪಾಪ ಎಂದು ನಿಜಾನುಕಂಪೆಯಿಂದ ಗೋದೆ ಇನ್ನೊಬ್ಬ ಸಖಿಯನ್ನು ಕರೆಯುತ್ತ ತನ್ನ ಹೃದಯ ವೈಶಾಲ್ಯವನ್ನು ಈ ಉದಯರಾಗದ ಪದ್ಯದಲ್ಲಿ ತೋಡಿಕೊಂಡಿದ್ದಾಳೆ.

ಎಣೆವಕ್ಕಿಗಣಮಿಂದು ಕೀಚು ಕೀಚೆಂದುಲಿಯೆ
ಕೇಳಲಿಲ್ಲವೆ ನಿನಗೆ ಮಂಕಿಡಿದ ಬಲುಮುಗುದೆ
ನರುಮಲರ ಸುಳಿಗುರುಳ ಕನ್ನೆಯರು ಕೆನೆಮೊಸರ
ಕಡೆವಾಗ ಕಾಸಾಮೆ ಸರಮಾಲೆ ಕಂಕಣದ
ಝುಣ ಝುಣವು ಕಿವಿದೆರೆಯ ಮುತ್ತಿಡೆಯು ನಾರಣನ
ಮೇಣೆಮ್ಮ ಕೇಶವನ ಶುಭನಾಮವಾಲಿಸದೆ
ಮಲಗಿರುವೆ ಯೇಕಮ್ಮ ಕಡುಜಾಣೆ ಕಾಂತಿಮತಿ
ತೆರೆಯಮ್ಮ ಬಾಗಿಲನು ವ್ರತಫಲವು ನಿಲುಕುವುದು ನಮಗಿಂದು -೭-

ಉಷಃಕಾಲವಿದು. ಭಾರದ್ವಾಜಪಕ್ಷಿಗಳು (ಎಣೆವಕ್ಕಿ) ಪರಸ್ಪರ ಪ್ರಣಯದಲ್ಲಿ ತೊಡಗಿ ಕಲಕಲಗುಟ್ಟುತ್ತಿವೆ. ಗೋಪಕನ್ನೆಯರು ಹರಯದ ಹುರುಪಿನಿಂದ ಮೊಸರು ಕಡೆಯುತ್ತಿರಲು ಕಡೆತದ ಸದ್ದು ಕೇಳಿ ಬರುತ್ತಿದೆ. ಅವರ ಕಂಕಣದ ಕಿಣಿಕಿಣಿ ಕೊರಳಿನ ಕಾಸಾಮೆ ಸರಮಾಲೆಗಳ ಝುಣಝುಣತ್ಕಾರ ನರುಗಂಪಿನ ಸುಳಿಗುರುಳಿಗೆ ಮುತ್ತಿದ ದುಂಬಿಗಳ ಝೇಂಕಾರ ನಮ್ಮ ನಾರಾಯಣ ರೂಪದ ಕೇಶವನ ನಾಮಸಂಕೀರ್ತನದ ಇಂಚರ - ಇವೊಂದೂ ನಿನ್ನ ಕಿವಿದೆರೆಗೆ ಬೀಳಲಿಲ್ಲವೆ. ನಿದ್ರೆಯನ್ನು ನಟಿಸುತ್ತ ಇನ್ನೂ ಮಲಗಿರುವೆಯ ಮಂಕು ಹಿಡಿದ ಮೈಗಳ್ಳಿ! ಎಲ್ಲಕ್ಕಿಂತ ಮಿಗಿಲಾಗಿ ಕೇರಳಾಧಿಪತಿ ಕುಲಶೇಖರ ಆಳ್ವಾರರು ಸಹ ನಿನ್ನ ಬಾಗಿಲಿನ ಬಳಿಬಂದು ನಿಂತಿದ್ದಾರೆ. ಬೇಗ ಎದ್ದು ಬಾರಮ್ಮ ನಮಗೆಲ್ಲ ರಾಣಿ ನೀನೆ, ಕಡು ಚೆಲುವೆ, ಲಾವಣ್ಯಲಕ್ಷ್ಮಿ, ಓಜಸ್ವಿನಿ, ತೇಜಸ್ವಿನಿ ಇಷ್ಟೊಂದು ಸೊಕ್ಕೇಕೆ ನಿನಗೆ, ಮರು ಮಾತನಾಡದೆ ನೀನೇ ಎದ್ದು ಬಂದು ಬಾಗಿಲನ್ನು ತೆರೆಯಮ್ಮ

ಎಷ್ಟು ಅಂಗಲಾಚಿದರೂ ಪ್ರಿಯಸಖಿ ಏಳಲಿಲ್ಲ. ಏನು ಮಾಡುವುದು. ತೆಗಳಿದರೆ ಅಲುಗಳು, ಹೊಗಳಿದರೆ ಎದ್ದು ಬಂದಾಳು ಎಂದು ಗೋದಾದೇವಿ ಉಪಾಯ ಹೂಡಿದಳು ತನ್ನ ಒಲವಿನ ಗೆಳತಿಯನ್ನು ಎಚ್ಚರಿಸಿ ವ್ರತಸ್ನಾನಕ್ಕೆ ಕರೆದುಕೊಂಡು ಹೋಗಲು ಇಂದೊಂದು ಮಾನವೀಯ ರಹಸ್ಯ.



(ಮೂಲದಲ್ಲಿ - ಈ ಪದ್ಯದಲ್ಲಿ ಆನೇಚ್ಚಾತ್ತಾನ್, ಪೇಯ್ ಸೆಂದೇ, ಕಾಶುಂಪಿರಪ್ಪುಂ ನಾಯಕನ್ ಎಂಬೀ ಪದಗಳು ಪ್ರಯೋಗವಾಗಿವೆ. ಇವು ಕೇರಳೀಯರ ನಡೆನುಡಿಗಳನ್ನು ಸೂಚಿಸುವುದರಿಂದ ಅಲ್ಲಿಯ ದೊರೆ ಕುಲಶೇಖರ ಆಳ್ವಾರರ ಸುಪ್ರಭಾತ ಸೂಕ್ತಿಯೆಂದು ಜ್ಞಾನಿಗಳು ಪ್ರತಿಪಾದಿಸುತ್ತಾರೆ.)

ಆವರಿಸುತಿದೆ ಮೂಡಣಾಗಸದ ಬೆಳ್ಳಿಳಗು
ಹುಲ್ಲೆಸಳು ಮೇಯಲ್ಕೆ ಪೋಗುತಿವೆ ಮಹಿಷಗಳು
ಪೋಗುವರ ಪಿಂತಿಟ್ಟು ಕರೆಯಲ್ಕೆ ಬಂದಿಹೆವು
ಮಜ್ಜನಕೆ; ಕೌತುಕದ ಕಿರಿಯವಳೆ ಕೇಳಿಂದು
ಹಯಮುಖದಿಂದ ಕೇಶಿಯನು ಸೀಳ್ಗಳೆದು ಚಾಣೂರ
ಮುಷ್ಟಿಕಾದಿ ರಕ್ಕಸರ ಸದೆಬಡಿದ ದೇವಾದಿ
ದೇವನನು ಪೂಜಿಸಲು ನಮಗಾಗಿ ಮನಕರಗಿ
ಮರುಗುವನು ಕರುಣಾಳು ವ್ರತಫಲವು ಸಿದ್ಧಿಪುದು ನಮಗಿಂದು -೮-

ಶುಕ್ರೋದಯವಾಯಿತು. ಮೂಡಣಾಕಾಶ ಬೆಳ್ಳಗಾಯಿತು. ಮಂಜುಮುಸುಕಿದ ಹುಲ್ಲೆಸಳನ್ನು ತಿನ್ನಲು ಮಹಿಷಗಳು ಹಿಂಡುಹಿಂಡಾಗಿ ಹೊರಟು ಬಿಟ್ಟಿವೆ. ನೀನು ಮಾತ್ರ ಇನ್ನೂ ಮಲಗಿರುವೆ. ಗೋಕುಲದ ಕನ್ನೆಯರು ಸ್ನಾನಕ್ಕಾಗಿ ನದಿಗೆ ಹೊರಟುಬಿಟ್ಟಿದ್ದಾರೆ. ನಿನಗಾಗಿ



ಅವರನ್ನು ದಾರಿಯಲ್ಲಿ ತಡೆದು ನಿಲ್ಲಿಸಿದ್ದೇನೆ. ನಮ್ಮೆಲ್ಲರಿಗಿಂತ ನೀನೇ ಶ್ರೀಕೃಷ್ಣತೃಷ್ಣೆಯಲ್ಲಿ ಪರಮೋತ್ಸಾಹಶಾಲಿ. ಬ್ರಹ್ಮರುದ್ರಾದಿಗಳೊಡೆಯ ಶ್ರೀಕೃಷ್ಣ. ಅಶ್ವಮುಖದ ಕೇಶಿಯನ್ನು ಸಿಗಿದುಹಾಕಿದ. ಚಾಣೂರ ಮುಷ್ಟಿಕಾದಿ ಮಲ್ಲರನ್ನು ಸೊಲ್ಲಡಗಿಸಿಕೊಂದ ದೇವಾದಿದೇವ. ಇಂತಹವನ ಸನ್ನಿಧಿ ಸಾರಿ ಅಗತ್ಯವಾದ ಪರಿಕರಗಳೊಡನೆ ಪೂಜಿಸೋಣ, ನಿನ್ನಂತಹ ದೈವಭಕ್ತೆಯನ್ನು ಮುಂದಿಟ್ಟುಕೊಂಡು ಸೇವೆಸಲ್ಲಿಸಿ ಶರಣಾಗೋಣ, ಆಗ ಅವನು ಮನಮರುಗಿ ಅಯ್ಯೋ ಪಾಪ ಎಂದು ಪರಿತಪಿಸಿ ಅನುಗ್ರಹಿಸುತ್ತಾನೆ. ನಮ್ಮ ವ್ರತವೂ ಕೈಗೂಡುತ್ತದೆ ಎಂದು ಹಾಡಿದ್ದಾಳೆ ಮಲರುಗಳ ಸೂಡಿಕೊಟ್ಟ ನಾಚ್ಚಿಯಾರ್ ಈ ಪಾಶುರದಲ್ಲಿ.

(ಈ ಪದ್ಯದ ರಹಸ್ಯಾರ್ಥವನ್ನು ಸವಿದ ಜ್ಞಾನಿಗಳು ಪ್ರಪನ್ನ ಜನಕೂಟಸ್ಥರಾದ ನಮ್ಮಾಳ್ವಾರರನ್ನು ಎಚ್ಚರಗೊಳಿಸುವ ಸುಪ್ರಭಾತ ಸೂಕ್ತಿ ಎಂದು ಸಕಾರಣವಾಗಿ ತಿಳಿಸಿದ್ದಾರೆ.)

ಮಣಿಗಣದ ಮಣಿದೀಪ ಮಾಳಿಗೆಯ ಬಳಸಿರಲು
ಸೆಲೆಯೊಡದ ನರುಗಂಪು ತೀಡುತಿರೆ ಪರಿಮಳವ
ಅರಸಂಚೆ ತುಪ್ಪಳಿನ ತಲ್ಪದೊಳು ಪಟ್ಟಿರುವೆ
ಮಾವನೊಲವಿನ ಮಗಳೆ ಮಣಿಕದವ ತೆರೆಯಮ್ಮ
ಏಳದಿರೆ ನೀವಾದರೆಚ್ಚರಿಸುವಿರ ಮಾಮಿ
[illegible]ಾಗಿ ಮೂಗಿಯೊ ಕಿವುಡಿಯೊ ಮಂಪರದ
[illegible]ರಗು[illegible]ಯೊ ಮಾಯಾವಿ ಮಾರಮಣ ವೈಕುಂಠ
[illegible]ಸುಳಿಯೆ ಬಂದಪಳೊ ವ್ರತಫಲವು ಸಿದ್ಧಿಪುದು ನಮಗಿಂದು -೯-

ಈ ಪದ್ಯದಲ್ಲಿ ಗೋದಾದೇವಿ ಎಚ್ಚರಿಸಲು ಪ್ರಯತ್ನಿಸುತ್ತಿರುವುದು ಶ್ರೀ ಕೃಷ್ಣಾನುಭವಪರಿಪೂರ್ಣಳಾದ ಭಾಗವತೋತ್ತಮೆಯೋರ್ವಳನ್ನು. ಇವಳು ಜ್ಞಾನ ನಿಧಿ. ಇವಳ ಮನೆಯೋ ರತ್ನಖಚಿತ ಸೌಧ. ಲಕ್ಷ್ಮೀನಾರಾಯಣರ ಕಾಂತಿಯಿಂದ ಸದಾ ಬೆಳಗುವ ನಂದಾದೀಪಗಳು ಸುತ್ತಲೂ ಉರಿಯುತ್ತಿವೆ. ಜ್ಞಾನ ಪರಿಮಳ ಆವರಿಸಿದೆ. ಮಲಗಿರುವ ಮೆತ್ತೆಯೋ ಬಿಳಿಯ ಸರ್ಪತಲ್ಪದಂತಿದೆ. ಮಾವನ ಮಗಳೆ, ರತ್ನದ ಕದವನ್ನು ತೆಗೆಯಮ್ಮ ಎಂದರೂ ತೆರೆಯಳು. ಶ್ರೀಕೃಷ್ಣನೇ ಬಂದು ತನ್ನನ್ನು ನಿದ್ರಾಪಾಶದಿಂದ ಬಿಡಿಸಲಿ ಬೇಕಾದರೆ ಎಂಬ ಕೆಚ್ಚು ಅವಳದು. ಏಕಸ್ಥ ಹೃದಯಾನೂನಂ ನಾಮಮೇವಾನುಪಶ್ಯಂ - ಶ್ರೀರಾಮನ ನಿರೀಕ್ಷಣೆಯಲ್ಲಿ - ಸಾಧ್ವೀಪತ್ಯುಃ ಪಾದಾರ್ಪಿತೇಕ್ಷಣಾ - ಸೀತೆಯಂತೆ ಈ ಭಗವದ್ಭಕ್ತೆ ತನ್ನ ಯೋಗನಿದ್ರೆಯಿಂದ ಎಚ್ಚರಗೊಳ್ಳಲೇ ಇಲ್ಲ. "ಆಗ ಸೋದರತ್ತೆ ನೀವಾದರೂ ನಿಮ್ಮ ಮಗಳನ್ನು ಎಬ್ಬಿಸುವಿರಾ" ಎಂದು ಗೋದಾದೇವಿ ಅಂಗಲಾಚಿ ಬೇಡಿಕೊಳ್ಳುತ್ತಾಳೆ. ಆದರೂ ಪ್ರಯೋಜನವಾಗಲಿಲ್ಲ. ಸ್ವಲ್ಪ ಕೋಪಗೊಂಡು 'ನಿಮ್ಮ ಮಗಳು ಮೂಗಿಯೊ, ಕಿವುಡೋ, ಹಗುಲುನಿದ್ದೆಯ ಕಟ್ಟ ಚಟದವಳೊ ಅಥವಾ ಮಂತ್ರಮುಗ್ಧಳೊ ಏನು ಬಂದಿದೆ ಇವಳಿಗೆ" ಎಂಬ ಪ್ರಶ್ನೆಗಳ ಸುರಿಮಳೆ ಸೂಸಿದರೂ, ಏಳಲೇ ಇಲ್ಲ. ಕಡೆಯಲ್ಲಿ ಯಾವ ಉಪಾಯವೂ ತೋಚದೆ ಸ್ವಲ್ಪ ದೆದರಿಕೆ ಹಾಕಿದಳು - ನಿನ್ನಿನಿಯ ಮಾಯಾವಿಯಾದ ಶ್ರೀಕೃಷ್ಣನೇ ಬಂದು ನಿಂತಿದ್ದಾನೆ. ತನ್ನೊಲವಿನ ಲಕ್ಷ್ಮಿಯನ್ನೂ ಬಿಟ್ಟು ಮಾಧವ ಬಂದಿದ್ದಾನೆ ನಿನ್ನ ಮನೆ ಬಾಗಿಲಿಗೆ. ಪಾಲ್ಗದಲು ಅವನಿಗೆ ಮಾವನಮನೆ. ಏನೋ ತುಸು ಬೇಸರಗೊಂಡು ತನ್ನತವರಾದ ವೈಕುಂಠಕ್ಕೆ ಹೊರಟುಬಿಟ್ಟಿದ್ದಾನೆ. ಅವನ ಹಲವಾರು ಹೆಸರುಗಳನ್ನೆತ್ತಿ



ಹಾಡಿದರೆ ಹಾಗೂ ನಿನ್ನನ್ನು ಮುಂದಿಟ್ಟುಕೊಂಡು ಸ್ನಾನಾರ್ಥವಾಗಿ ತೆರಳಿದರೆ ಅವನ ಸಾನ್ನಿಧ್ಯ ನಮಗೆ ದೊರಕುತ್ತದೆ. ನಮ್ಮ ವ್ರತ ನೆರವೇರುತ್ತದೆ, ಎದ್ದು ಬಾರಮ್ಮ - ಎಂದು ಕೊರಲೆತ್ತಿ ಕರೆಯುತ್ತಾಳೆ ತನ್ನ ಪ್ರಿಯ ಸಖಿಯನ್ನು ಆಂಡಾಳ್.

(ಈ ಪದ್ಯ ತಿರುಮಳಿಶೈ ಆಳ್ವಾರರಿಗೆ ಅನ್ವಯವಾಗುವ ಸುಪ್ರಭಾತಸೂಕ್ತಿ ಎಂಬುದು ಜ್ಞಾನಿಗಳ ಅಭಿಪ್ರಾಯ.)

ವ್ರತವೆಸಗಿ ಸ್ವರ್ಗವಡರುವ ತಾಯಿ ನೀನೆಮಗೆ
ಬಾಗಿಲನು ತೆರೆಯದಿರ್ದೆಡೆಯು ಮೌನವಿದೇಕೆ?
ಪರಿಮಳದ ತುಳಸಿಯನು ಮುಡಿದಿರ್ಪ ನಾರಣನ
ನುತಿಸಿದೆಡೆ ನೀಡುವನು ಬೇಡಿದುದ ನಮಗಿಂದು
ರಘುಪತಿಯ ಕೂರ್ಗಣೆಗೆ ಸಲೆಸೋತು ಪಿತೃಪತಿಯ
ಬಾಯ್ದೊಕ್ಕ ಕುಂಭಕರ್ಣನಪಾರ ನಿದ್ರೆಯನು
ನಿನಗಿತ್ತು ತೊಲಗಿದನೊ ಕನ್ಯಕಾಮಣಿ ನೀನು
ಮಣಿಕದವ ತೆರೆ ಯಮ್ಮ ವ್ರತಫಲವು ಸಿದ್ಧಿಪುದು ನಮಗಿಂದು -೧೦-



ವ್ರತವೆಸಗಿ ಪರಮಪದ ಪ್ರಾಪ್ತಿಗೆ ಸಿದ್ಧಳಾಗಿರುವ ನೀನು ನಮಗೆ ತಾಯಿಯಂತೆ, ಕದವ ತೆರೆ. (ತುಸು ಹೊತ್ತಾದರೂ ತೆರೆಯದಿರಲು) ಚಿಂತೆಯಿಲ್ಲ ಒಂದು ಮಾತನ್ನಾದರೂ ಆಡಬಾರದೆ, ಮಾತನಾಡಿದರೆ ಮುತ್ತು ಸುರಿಯುವುದೆ? ಬಾಯಿ ತೆರೆದು ಬೇಡಿದರೆ ಸಾಕು, ವರದಾನ ಮಾಡಲು ಸಿದ್ಧನಾಗಿ ನಿಂತಿದ್ದಾನೆ ತುಲಸೀಮಾಲಾಧಾರಿ ಶ್ರೀಮನ್ನಾರಾಯಣ. ಅವನ ಕೊರಳ ತುಲಸೀ ಮಾಲೆಯ ನರುಗಂಪನ್ನು ಕೂಡ ನೀನು ಆಘ್ರಾಣಿಸಲಿಲ್ಲವೆ........... (ಉತ್ತರ ಬರದಿರಲು) ಏನೇ ಅದೆಂತಹ ನಿದ್ದೆ ನಿನಗೆ ? ಶ್ರೀರಾಮನು ಕುಂಭಕರ್ಣನನ್ನು ಸೋಲಿಸಿ ಯಮನ ಬಾಯಿಗೆ ತುರುಕಿದಾಗ, ಆ ರಾಕ್ಷಸ ತನ್ನೆಲ್ಲ ನಿದ್ರೆಯನ್ನೂ ನಿನಗೆ ದಾನ ಮಾಡಿ ಹೋದನೇ; ಹೇ ನಿದ್ರಾಂಗನೆ ಎದ್ದುಬಾ ನಮ್ಮೊಡನೆ ಸೇರು ವಧೂಜನಾಲಂಕಾರಭೂತೆ, ಪರಮ ವಿವೇಕಶಾಲಿನಿ, ಬೇಗನೆ ಬಂದು ಬಾಗಿಲನ್ನು ತೆರೆದುಬಿಡು ನಮ್ಮ ವ್ರತಫಲವು ನಿಲುಕುವ ಕಾಲವಿದು ಎನ್ನುತ್ತಾಳೆ ವಿಷ್ಣುಚಿತ್ತಾತ್ಮಜೆ ಗೋದಾದೇವಿ.

(ಕುಂಭಕರ್ಣನ ಗಾಢ ನಿದ್ರೆಗೆ ತನ್ನ ಕೂರಂಬಿನ ಮೂಲಕ ಚರಮಗೀತೆ ಹಾಡಿದ ಶ್ರೀರಾಮಚಂದ್ರನ ಸವಿನೆನಪಿನ ಮೂಲಕ ಪೆರಿಯಾಳ್ವಾರರಿಗೆ ಒಪ್ಪುವ ಪ್ರಬೋಧಕಗೀತೆ ಇದೆಂಬುದು ಸ್ವಾಪದೇಶಾರ್ಥ)

(ಮುಂದುವರೆಯುವುದು).

# ಮಹಾರಾಜ ಸ್ವಾತಿ ತಿರುನಾಳ್

---ಎಂ. ಸಿ. ನರಸಿಂಹನ್.



ಮುಂದೆಳಗಿನ ಕುಳುಕುಳು ಮಂದಮಾರುತ, ಆಗ ತಾನೇ ಉದಿಸಿದ ಉದಯರವಿಯ ಹೊಸ ಕಿರಣಗಳ ನಸುಬೆಚ್ಚಗಿನ ವಾತಾವರಣ, ಜನಸಂಚಾರ ಇನ್ನೂ ಹೆಚ್ಚು ಪ್ರಾರಂಭವಾಗದ ಅಂತಹ ನಿಶ್ಶಬ್ದ ದೈವೀ ಮುಹೂರ್ತದಲ್ಲಿ ದೇವಸ್ಥಾನದಿಂದ 'ಕೌಸಲ್ಯಾಸುಪ್ರಜಾರಾಮ.... ಶ್ರೀ ವೇಂಕಟೇಶ ಸುಪ್ರಭಾತದ ಪದ್ಮಭೂಷಣ ವಿದುಷಿ ಎಂ. ಎಸ್. ಸುಬ್ಬುಲಕ್ಷ್ಮಿಯವರ ಕೋಕಿಲಗಾನ ಕೇಳುತ್ತ ಕೇಳುತ್ತ ಕೈಜೋಡಿಸಿ ಕಣ್ಮುಚ್ಚಿ ಧ್ಯಾನ. ಅದಾದ ನಂತರವೇ ಆರಂಭ- 'ಭಾವಯಾಮಿ ರಘುರಾಮಮ್ ಭವ್ಯ ಸುಗುಣಾರಾಮಮ್' ಸಾವೇರಿಯ ಅದ್ಭುತ ಪ್ರಾರಂಭ ರಾಗಗಾನ, ಓಹ್, ಅದೆಂಥಹ ದಿವ್ಯಾನುಭವ!

ದಿನಕರವಂಶ ತಿಲಕನಾಗಿ ಉದಯಿಸಿ, ಸುಬಾಹುವನ್ನು ವಧಿಸಿ, ಅಹಲ್ಯೆ ರಕ್ಷಿಸಿ, ಜನಕಸುತೆಯ ಪ್ರಾಣೇಶನಾಗಿ ಘನಕುಪಿತ ಭೃಗುರಾಮನ ಗರ್ವದ ಬಿಲ್ಲಿಗೆ ನಾಣುಹೂಡಿ, ಶಾಂತತಮಶೀಲನಾಗೇ ಸೀತಾ ಸೌಮಿತ್ರಿ ಸಹಿತ ವಿಪಿನಗತನಾಗಿ, ಗುಹನಿಗೆ ಕೃಪೆತೋರಿ, ಭರತನಿಗೆ ರತ್ನಪಾದುಕೆ ನೀಡಿದ ರಘುರಾಮ; ದಂಡಕದಲ್ಲಿ ಅಗಸ್ತ್ಯರಿಂದ ವೈಷ್ಣವಾಸ್ತ್ರ ಸ್ವೀಕರಿಸಿ, ಪತಗ ಶ್ರೇಷ್ಠ ಜಟಾಯುವನ್ನು, ದರ್ಶಿಸಿ, ಪಂಚವಟಿಯಲ್ಲಿ ಶೂರ್ಪನಖಿಗೆ ಬುದ್ಧಿ ಕಲಿಸಿದ ಮೋಹನರಾಮ! ಕನಕ ಮೃಗಕ್ಕಾಗಿ ದೂರ ಓಡಿ, ದಶಾಸ್ಯ ಹೃತ ಜನಕಜೆಯ ಅನ್ವೇಷಣೆ ಮಾಡಿ, ಆಂಜನೇಯ, ಸುಗ್ರೀವ ಸಖ್ಯಗಳಿಸಿ ವಾಲಿ ಮರ್ದಿಸಿದ ಈಶ! ಶತಭಾನು ಪ್ರಕಾಶಿತ ರತ್ನಾಂಗುಳೀಯವನ್ನು, ವಾಯುಸೂನುವಿಗೆ ನೀಡಿ, ಮುಂದೆ ಆತ ಮತ್ತೆ ಮರಳಿ ಅರ್ಪಿಸಿದ ಚೂಡಾಮಣಿ ದರ್ಶಿಸಿ 'ಶ್ರೀನಿಧಿ'ಯಾದ ವಿಭೀಷಣಾಶ್ರಯ ರಾಮ! ಜೀವಾತ್ಮ ಪರಮಾತ್ಮರಿಗೆ ರಾಮ ಸೇತು ನಿರ್ಮಿಸಿ ದಶಕಂಠನನ್ನು ಸಂಹರಿಸಿ ಸದಾ ಪರಿಶುದ್ಧ ಸೀತೆ ಸಹಿತ ಸಾಕೇತಪುರಿಯಲ್ಲಿ ಪಟ್ಟಾಭಿಷಿಕ್ತನಾದ ವಿಶ್ವಪಾಲ ಪದ್ಮನಾಭ!

ಸಾವೇರಿ, ನಾಟಕುರಂಜಿ, ಧನ್ಯಾಸಿ, ಮೋಹನಮ್, ಮುಖಾರಿ, ಪೂರ್ವೀಕಲ್ಯಾಣಿ, ಮಧ್ಯಮಾವತಿ -- ಹೀಗೆ ಆಯಾ ಕಾಂಡಗಳ ಭಾವನೆಗಳಿಗನುಸಾರ! (ಅದರಲ್ಲೂ ಮೋಹನದ 'ಗಾ' ಸ್ವರ-)

ಈ ಯುಗದ ಶ್ರೀವಾಣಿ ಎಂ.ಎಸ್.ರ ಭಕ್ತಿಪೂರ್ಣ ಕಂಠಶ್ರೀಯ ಸೊಬಗಿನಲ್ಲಿ ಸುಮಾರು ಇಪ್ಪತ್ತು ನಿಮಿಷಗಳಲ್ಲಿ ರಾಮಾಯಣದ ಎಲ್ಲ ದೃಶ್ಯಗಳೂ ಕಣ್ಮುಂದೆ! ಆಯಾ ವ್ಯಕ್ತಿಗಳಾಗಿಯೇ ಅನುಭವಿಸಿ ರೋಮಾಂಚನಗೊಳ್ಳುವ ಅಪೂರ್ವ ಅಸದೃಶ ಭಾವನೆ! ಶ್ರೀರಾಮನಿಗೇ ಅರ್ಪಣೆ! ಮತ್ತೆ ಮತ್ತೆ ಎಲ್ಲಿ ಯಾವಾಗ ಕೇಳಿದರೂ ಮಗದೊಮ್ಮೆ ಕೇಳಬಯಸುವ ಶರಣಾಗತ ಆಕರ್ಷಣೆ - ಯಾರು ರಚಿಸಿದರು - ಈ ಅಮೃತ ಸಂಸ್ಕೃತ ಸುಸಂಸ್ಕೃತ ಚೆಲುವ ರಾಗಮಾಲಿಕೆ! ಅವರೇ ಕರ್ನಾಟಕ ಸಂಗೀತದ ಅತ್ಯಂತ ಪ್ರತಿಭಾವಂತ ವಾಗ್ಗೇಯಕಾರ, ಕವಿ, ಪ್ರಜಾವತ್ಸಲ, ದೇವಭಕ್ತ, ಕಲಾವಿದರ ಕಲ್ಪವೃಕ್ಷ ಕೇರಳದ ಮಹಾರಾಜ ಸ್ವಾತಿ ತಿರುನಾಳ್. ಅವರನ್ನು ನೆನೆದ ದಿನ ನಿಜವಾಗಿಯೂ 'ತಿರುನಾಳ್'. ಎರಡು ದಶಕಗಳ ಹಿಂದೆಯೇ ಈ ರಾಮಾಯಣ ರಾಗಮಾಲಿಕೆ ತುಂಬ ಜನಪ್ರಿಯವಾಗಿದ್ದಿತು; ಎಲ್ಲ ವಿದ್ವಾಂಸರೂ ಹಾಡುತ್ತಿದ್ದರು. ಈಗಲೂ ಆ ಧ್ವನಿ ಮುದ್ರಣ ಕೇಳಿದರೆ ಅದೊಂದು ನೆನಪಿನ ಕಾಣಿಕೆ.

ಮಹಾರಾಜರು ಸುರುಟಿಯಲ್ಲಿ 'ಅಲರ್‌ಶಲ್ ಪರಿತಾಪಂ' - ನೃತ್ಯಗೀತೆಯಲ್ಲಿ, ಭಕ್ತಿ ವಿರಹತಾಪದಲ್ಲಿ ನುಡಿಸಿ, ನುತಿಸಿ ಪದ್ಮನಾಭನಿಗೆ ಅರ್ಪಿಸುತ್ತಿದ್ದರು. ಅಂತಹ ಮಧುರ ಭಕ್ತಿ ಸ್ವತಃ ನಾಟ್ಯಾಚಾರ್ಯ ವಡಿವೇಲು, ನರ್ತಕಿ ತಂಗಚ್ಚಿ ಅವರುಗಳಿಗೂ ಅರಿಯಲು ಕಾಲ ಬೇಕಾಯ್ತು. ಅನಂತ ಪ್ರೀತಿಯಲ್ಲಿ ಕೃತಿ ರಚಿಸಿ ಧನ್ಯರಾಗುತ್ತಿದ್ದರು.

ಕ್ರಿ.ಶ. ಎಂಟನೇ ಶತಮಾನದಲ್ಲಿ ಆಚಾರ್ಯ ಆದಿ ಶಂಕರರು ಅವತರಿಸಿ ಭಾರತದಲ್ಲೆಲ್ಲ ಸಂಚರಿಸಿ, ಹಿಂದೂ ಧರ್ಮದ ಪುನರುತ್ಥಾನ ಮಾಡಿ ಕೇರಳಕ್ಕೆ ಆಧ್ಯಾತ್ಮಿಕ ಹಿರಿಮೆ ಗಳಿಸಿಕೊಟ್ಟರು. ಸಾವಿರ ವರ್ಷದ ನಂತರ ಕೇರಳಕ್ಕೆ ಕಲಾಪ್ರಪಂಚದಲ್ಲೇ ಉನ್ನತಸ್ಥಾನ ಗಳಿಸಿಕೊಟ್ಟ ಮಹತ್ಸಾಧನೆ ಸ್ವಾತಿ ತಿರುನಾಳ್ ಅವರದು.

ಅವರು ತಾವಿದ್ದ ಸ್ಥಳದಲ್ಲಿಯೇ ಅನೇಕ ಭಾಷೆ ಕಲಿತರು. ಲಲಿತ ಕಲಾಶ್ರಯರಾದರು. ಕಲಾಢ್ಯ

> ಕೇರಳದ ತಿರುವಾಂಕೂರಿನ ರಾಜ, ವಾಗ್ಗೇಯಕಾರ ಸ್ವಾತಿ ತಿರುನಾಳರ ಉಲ್ಲೇಖವಿಲ್ಲದ ಕರ್ನಾಟಕ ಸಂಗೀತ ಅಪೂರ್ಣ. ಅಂತಹ ಮಹತ್ತರ ಸಾಧನೆ, ಕೊಡುಗೆ ಅವರದು. ಕೇವಲ ತಮ್ಮ ಸಾಧನೆಯಿಂದ ಮಾತ್ರವೇ ಅಲ್ಲದೆ, ಅಂತಹ ಅನೇಕ ಸಾಧಕರಿಗೆ, ವಿಶಾಲವಾಗಿ ಬೆಳೆಯಲು ನೀರು ನೆಲವನ್ನು ಕೊಟ್ಟು ಪೋಷಿಸಿದ ಕಲ್ಪತರು ಆತ. ಅಂತಹವರ ನೆನಪಿನಲ್ಲಿ - ಡಿಸೆಂಬರಿನಲ್ಲಿ ಅವರ ತಿರುನಾಳ್ - ಒಂದು ಕಾಣಿಕೆ. ಅವರ ನಿಜವಾದ ತಿರುನಾಳ್ ಆಗಬೇಕೆಂಬುದನ್ನು ಲೇಖಕರು ವಿವರಿಸಿದ್ದಾರೆ

ಯನ, ಭಾರತೀದರ್ಶನ, ಮಹಾವ್ಯಕ್ತಿ ಸಂದರ್ಶನ, ಪೋಷಣ, ಪ್ರಜಾಹಿತರಕ್ಷಣ, ಶ್ರೀ ಅನಂತ ಪದ್ಮನಾಭ ಧ್ಯಾನ - ಸೇವೆಗೆ ಉತ್ತಮ ಸಾಧನ.

ಕರ್ನಾಟಕ ಸಂಗೀತ ತ್ರಿಮೂರ್ತಿಗಳು ಅನೇಕ ಶಿಷ್ಯ ಸಂಪತ್ತು ಗಳಿಸಿದ ಕಾಲ ಅದು. ೧೮೧೩ ರ ಏಪ್ರಿಲ್ ೧೯ ರಂದು ಸ್ವಾತಿ ತಿರುನಾಳ್ ರಾಮವರ್ಮರು ತಿರುವಾಂಕೂರಿನ ವಂಚಿ ರಾಜವಂಶದಲ್ಲಿ ಜನಿಸಿ ತಾಯ್ತಂದೆಯರಿಗೆ ಸಂತಾನದ ಹಂಬಲ ನೀಗಿಸಿದರು. ಇವರ ತಮ್ಮ ಉತ್ತಂ ತಿರುನಾಳ್ ಮಾರ್ತಾಂಡ ವರ್ಮ. ಇಬ್ಬರಿಗೂ ತಂದೆಯೇ ಪ್ರಥಮ ಗುರು. ಆಂಗ್ಲ, ಮಲೆಯಾಳ, ಸಂಸ್ಕೃತ, ಪರ್ಷಿಯನ್ ಭಾಷಾ ಶಿಕ್ಷಣ. ಜೊತೆಗೆ ಸಂಗೀತ, ಚಿತ್ರಕಲೆ, ವೀಣಾವಾದನ - ಹೀಗೆ ಹಲವು ಲಲಿತ ಕಲಾಶಿಕ್ಷಣ. ಹದಿನಾರನೇ ವಯಸ್ಸಿನಲ್ಲಿ ಹದಿನಾಲ್ಕು ಭಾಷೆಗಳಲ್ಲಿ ಪ್ರವೀಣರಾದರು. ೧೮೨೯ ರಲ್ಲಿ ತಿರುವಾಂಕೂರಿನ ಸಂಸ್ಥಾನದ ಮಹಾರಾಜರಾಗಿ ಸಿಂಹಾಸನ ಆರೋಹಿಸಿದರು.

ಹಲವು ರಾಜಕೀಯ - ಕೌಟಂಬಿಕ ಕಷ್ಟ - ಕಲಹಗಳು ರಾಜಾ ಸ್ವಾತಿ ತಿರುನಾಳ್‌ರನ್ನು ದೈಹಿಕ ಮಾನಸಿಕ ಪರೀಕ್ಷೆಗೆ ಒಳಪಡಿಸಿದವು. ಆದರೆ ಆಧ್ಯಾತ್ಮಿಕವಾಗಿ ಎತ್ತರಕ್ಕೇರಿಸಿ ಭಗವಂತನೆಡೆಗೆ ಒಯ್ದವು. ಪೂಜಾ ಗೃಹವನ್ನೇ ಸ್ವಗೃಹವನ್ನಾಗಿಸಿಕೊಂಡು ತಮ್ಮ ನೋವು ನುಂಗಿ, ಸದಾ ಅನಂತ ಪದ್ಮನಾಭನನ್ನು ಆರಾಧಿಸುತ್ತ ೧೮೪೬ ರ ಡಿಸೆಂಬರ್ ೨೬ ರಂದು ಅನಂತನಲ್ಲಿ ಐಕ್ಯರಾದರು.

ತಿರುನಾಳರ ಆಸ್ಥಾನ ವಿದ್ವಾಂಸರಾಗಿದ್ದ ಪಟ್ಟಾಲ ಗೋವಿಂದಮಾರಾರ್ (ಏಳು ತಂತಿಯ ತಂಬೂರಿಯಲ್ಲಿ ಆರು ಕಾಲಗಳಲ್ಲಿ ಪಲ್ಲವಿ - ಅಸಾಮಾನ್ಯ ಸಾಧನೆ) ಅವರನ್ನು ಸ್ವತಃ ತ್ಯಾಗರಾಜಸ್ವಾಮಿಗಳು ಅಭಿನಂದಿಸಿ 'ಎಂದರೋ ಮಹಾನುಭಾವುಲು' ಕೃತಿ ಸೃಜಿಸಿದರು. ಅಂತ ವಿದ್ವಾಂಸರ ಕಲ್ಪವೃಕ್ಷ ತಿರುನಾಳ್.

೧೭೭೮ ರಿಂದ ೧೮೩೨ ರ ವರೆಗೆ ಆಳಿದ ದಕ್ಷಿಣದ ವಿಕ್ರಮಾದಿತ್ಯ ಶರಭೋಜಿಯ ನಂತರ ಅಲ್ಲಿನ ವಿದ್ವಾಂಸರು ಕೇರಳಕ್ಕೆ ಆಗಮಿಸಿದರು. ಎಲ್ಲ ಭಾಷೆ ಸಂಸ್ಕೃತಿ ತಿರುನಾಳರಿಗೆ ಹಿತ; ಗುಣ, ಭಕ್ತಿ ಮುಖ್ಯ. ಹಿಂದೂಸ್ತಾನೀ ಗಾಯನ, ವೀಣಾವಾದನ ಪ್ರವೀಣ ರಂಗಯ್ಯಂಗಾರ್, ಸಾರಂಗಿ ನಿಪುಣ ಚಿಂತಾಮಣಿ, ವೀಣಾವಾದಕ ಚೇಲಾಪುರಂ ರಘುನಾಥ ಭಾಗವತರು, ತ್ಯಾಗರಾಜರ ಶಿಷ್ಯ ಕನ್ನಯ್ಯ ಭಾಗವತರು, ಸ್ವರ-ಜತೆ ನಿಪುಣ ತಂಜಾವೂರ್ ಸುಲೇಮಾನ್ ಸೇಟ್, ಮುತ್ತುಸ್ವಾಮಿ ದೀಕ್ಷಿತರ ಶಿಷ್ಯ ವಡಿವೇಲು, ಪೊನ್ನಯ್ಯ ಚಿನ್ನಯ್ಯ ತಂಜಾವೂರ್ ವೆಂಕಟರಾಜ ಭಾಗವತರು, ಪಟ್ಟಾಲ ಗೋವಿಂದ ಮಾರಾರ್, ಪಾಲಘಾಟ್ ಶೇಷಭಾಗವತರು, ಕಲ್ಲುಳಂ ಶೇಷ ಭಾಗವತರು, ಮೈಸೂರಿನ ಅಲ್ಲಾವುದ್ದೀನ್ (ಹಿಂದೂಸ್ಥಾನಿ) ಮೋಹಿನಿ ಆಟ್ಟಂ ರಾಮನಾಥ ಮಾಣಿಕ್ಯಂ, ಭರತನಾಟ್ಯದ ತಂಗಚ್ಚಿ - ಹೀಗೆ ಅಸಂಖ್ಯಾತ ಕಲಾವಿದರಿಗೆ ಆಶ್ರಿತಕಾಮಧೇನು.

ಇಂದಿಗೂ, ತೊಟ್ಟಿಲ ಮಗುವಿಗೆ ಕೇರಳದಲ್ಲಿ ಮಹಾಕವಿ ರವಿವರ್ಮ ತಂಬಿಯ - ಓಮನ ತಿಂಗಳ್ ಕಿಡಾವೋ - ಲಾಲಿ ಹೇಳಿಯೇ ಸಮಾಧಾನ. ಅರಿಪಾಡು ಕೊಚ್ಚುಪಿಳ್ಳೆವಾರಿಯರ್, ತಿಳಿಮಾನೂರ್ ರಾಜರಾಜವರ್ಮ ಕೋಯಿಲ್ ತಂಬಿರಾನ್........ ಹೀಗೆ ನವಕವಿ ಆಸ್ಥಾನ ಮಣಿಗಳು. ಅಲ್ಲದೆ ಎಷ್ಟೋ ಉದಯೋನ್ಮುಖ ಕಲಾವಿದರನ್ನು ಪ್ರಕಾಶಕ್ಕೆ ತಂದ ತಂದೆ ತಿರುನಾಳ್. ಚಂಗನ ಚೇರಿಯ ದಂತಶಿಲ್ಪ, ಸೋದರ ದೇಶಗಳಿಂದ ಶಸ್ತ್ರಾಸ್ತ್ರ ಶಿಕ್ಷಣ, ಕೇರಳದ್ದೇ ಯುದ್ಧಕಲೆ ಕಳಂ ಪಯುಟ್ಟು, ದೃಶ್ಯಕಲೆ ಕಥಕ್ಕಳಿ, ಇಂದ್ರಜಾಲ, ಹರಿಕಥೆ ಮಲ್ಲವಿದ್ಯೆ ಹೀಗೆ ಸಾಂಸ್ಕೃತಿಕ ರಕ್ಷಣಾಕಲೆಗೆ ಪ್ರೋತ್ಸಾಹ.

ಅವರ ಕೃತಿಗಳು :-- ಕೀರ್ತನೆ, ಚಾಕವರ್ಣ, ನೃತ್ಯಗೀತೆ - ಹೀಗೆ ಸಾವಿರಕ್ಕಿಂತಲೂ ಹೆಚ್ಚು ರಚನೆ. ಈಗ ಎಲ್ಲವೂ ಅಲಭ್ಯ. ಸಂಸ್ಕೃತದಲ್ಲಿ - ೧೯೭, ಮಲೆಯಾಳದಲ್ಲಿ -೯೩, ಹಿಂದೂಸ್ಥಾನಿಯಲ್ಲಿ -೩೭, ತೆಲುಗಿನಲ್ಲಿ ೮, ಕನ್ನಡ - ೧, - ಇಷ್ಟು ಸಿಕ್ಕಿವೆ. ಭಕ್ತಿ ಮಂಜರಿ ೧೧೦೦ ಸಂಸ್ಕೃತ ಶ್ಲೋಕ - (ಶ್ರೀಹರಿ ನಮನ) ಸ್ಯಾನಂದೂರು ಪುರವರ್ಣನ ಪ್ರಬಂಧಂ - ಚಂಪೂ ಮಹಾಕಾವ್ಯ ಅನಂತ ಪದ್ಮನಾಭ ದೇವರೇ ನಾಯಕ. ಶ್ರೀ ಪದ್ಮನಾಭ ಶತಕ (ವಿವಿಧ ಛಂದಸ್ಸು) ಅಜಾಮಿಳೋಪಖ್ಯಾನ, ಕುಚೇಲೋಪಖ್ಯಾನ, ಹರಿಕಥಾ ರೂಪಿ ಕೃತಿಗಳು. ಜಯದೇವನ ಅಷ್ಟಪದಿಯ ಮಾದರಿ ಉತ್ಸವ ವರ್ಣನ ಪ್ರಬಂಧ (ಮಲೆಯಾಳ) ಸಹ ಹರಿಕಥೆ.

ಶೈಲಿ :-- ಪರಮಪುರುಷ ಜಗದೀಶ್ವರ ಜಯ ಜಯ - ಜಯದೇವ ಕಿಶೋರ ಮಂಗಳ ಗೀತೆ. ಅಪೂರ್ವ ರಾಗಗಳಾದ ದ್ವಿಜಾವಂತಿ, ಲಲಿತ, ಪೂರ್ವಿ ಕಲ್ಯಾಣಿ, ಮುಂತಾದವುಗಳಲ್ಲಿ ಹಲವು ಕೀರ್ತನೆ. ಹಿಂದೂಸ್ಥಾನಿಯ ಧ್ರುವಪದ, ಖಯಾಲ್, ಧೃತಿಗಜಲ್, ಟಪ್ಪ, ಖಡ - ಮುಂತಾದ ರೀತಿಗಳಲ್ಲಿ ಹರಿಕಥೆ ರಚನೆ, ಪ್ರಸಾರ. ಮಹಾರಾಷ್ಟ್ರದ್ದಾದ ಸಾಕಿ, ದಿಂಡಿ, ಓವಿ, ಪಂಚಚಾಮರಂ, ಕೇಶಾವಲಂ - ಮುಂತಾದ ಮಟ್ಟುಗಳಲ್ಲೂ ರಚನೆ. ಅಂಕಿತ ನಾಮ - ಪದುಮನಾಭ, ಅಂಬುಜನಾಭ, ಕಮಲನಾಭ, ಪಂಕಜನಾಭ - ಹೀಗೆ ತಿರುನಾಳರ ಜೀವನವೇ ಅನಂತ ಪದ್ಮನಾಭಸ್ವಾಮಿಗೆ ಅಂಕಿತ, ಅರ್ಪಿತ. ಭಾವಯಾಮಿ ರಾಗಮಾಲಿಕೆ ನಿತ್ಯನೂತನ. ಕೇರಳದ ಆಸ್ಥಾನ ವಿದ್ವಾನ್ ಶೆಮ್ಮಂಗುಡಿ ಶ್ರೀನಿವಾಸ ಅಯ್ಯರ್ ಹಾಗೂ ವಿದುಷಿ ಎಂ. ಎಸ್. ಅವರುಗಳಿಂದಾಗಿ ನಾಡೆಲ್ಲ ರಘುರಾಮನನ್ನು ಭಾವಯಾಮಿ ಎನ್ನುವಂತಾಯ್ತು. ನವರಾತ್ರಿ ದಿನಕೃತಿಗಳು ಇನ್ನೊಂದು ವಿಶೇಷ.

ವಿದ್ವಾನ್ ವಡಿವೇಲು ಅವರನ್ನು ಕಳುಹಿಸಿ ತ್ಯಾಗರಾಜಸ್ವಾಮಿಗಳನ್ನು ಬರುವಂತೆ ವಿನಂತಿಸಿಕೊಂಡರು. ಆದರೆ ಹಾಗೆ ಸಾಧನೆಯಾಗಲಿಲ್ಲ. ಸ್ವಾತಿ ತಿರುನಾಳ್ ಸಂಗೀತ ಕಾಲೇಜು ೧೯೩೯ ರಲ್ಲಿ ಸ್ಥಾಪನೆ. ಮಹಾರಾಜ ಚಿತ್ತಿರೈ ತಿರುನಾಳ್ ಹಾಗೂ ಮಹಾರಾಣಿ ಸೇತು ಪಾರ್ವತೀಬಾಯಿ ಇದನ್ನು ಸ್ಥಾಪಿಸಿದರು. ಪ್ರಾಂಶುಪಾಲರು ಗಾಯಕ ಶಿಖಾಮಣಿ ಮುತ್ತಯ್ಯ ಭಾಗವತರು. ಗಾಯಕ, ಗಾಯಿಕಾ, ಗಾನಭೂಷಣ, ಗಾನಪ್ರವೀಣ, ನಟನ ಭೂಷಣ - ಹೀಗೆ ವಿವಿಧ ತರಗತಿಗಳು.

ಸ್ವಂತ ಸುಖವನ್ನು ಗಣಿಸದೆ, ಪ್ರಜಾಹಿತ ರಕ್ಷಣೆ, ನಾದೋಪಾಸನೆ, ಗ್ರಂಥರಚನೆ, ಕಲಾರಾಧನೆ, ಅನಂತಪೂಜಾ ಪಾಲನೆ ಎಂದು ಆದರ್ಶ ರಾಜರಾಗಿ ವಾಗ್ಗೇಯಕಾರರಾಗಿ, ಭಾರತೀಯ ಸಾರಸ್ವತ ಪ್ರಪಂಚದಲ್ಲಿ ಇಂದೂ ಬೆಳಗುವ ತಾರೆಯಾದರು. ಕೇವಲ ೩೩- ೩೪ ವರ್ಷಗಳಲ್ಲಿ ಸೇವಾಸಾಧನೆ. ಅವರು ಅನಂತ ಪದ್ಮನಾಭನಲ್ಲಿ ಐಕ್ಯವಾದದ್ದನ್ನು ಅಂದು ಪ್ರಾತಃಕಾಲ ಶ್ರೀ ನೃಸಿಂಹದೇವರ ಗುಡಿಯ ಅರ್ಚಕರು ಕಂಡ ಐತಿಹ್ಯವಿದೆ. ಸದಾ ಪರಮಾತ್ಮ ಚಿಂತನ, ಮಾನವಸೇವೆಯಲ್ಲಿ ಮಾಧವಸೇವಾ ಭಾವನ, ಕಲಾಭಿಮಾನ, ಕಲಾತಪಸ್ವಿ ಪೋಷಣ, ಹೀಗೆ ಭಾರತ ಭಾವೈಕ್ಯ ಸಂಸ್ಕೃತಿ ಪ್ರಸರಣ ರಾಜಾ ಸ್ವಾತಿ ತಿರುನಾಳ್ ಅನಂತ ಹಿರಿ ಚೇತನ.

ಕೇರಳದ ಅನೇಕ ಸಾಂಸ್ಕೃತಿಕ ಧಾರ್ಮಿಕ ಧ್ರುವ ತಾರೆಗಳಲ್ಲಿ ಪ್ರಮುಖ - ಆದಿ ಶಂಕರರ ಆಧ್ಯಾತ್ಮದರ್ಶನ, ರಾಜಾ ರವಿವರ್ಮನ ಚಿತ್ರಕಲಾ ಸಂವರ್ಧನ, ಸ್ವಾತಿ ತಿರುನಾಳರ ಅನಂತ ಗಾಯನ. ಸ್ವಾತಿ ತಿರುನಾಳರದು ಹಿಂದಿನ ರಾಜಾ ಕುಲಶೇಖರರ 'ಉನ್ ಪಡಿಯಾಯ್ ಕಿಡಂದು ಪವಳವಾಯ್ ಕಾಣ್ಬೇನೆ' ಭಕ್ತಿಯ ಉತ್ಕೃಷ್ಟ ಚೇತನ.

ಅವರ ಅಮೃತ ಹೃದಯದ ಎಲ್ಲ ಕೃತಿಗಳ ರಕ್ಷಣ, ಸಂವರ್ಧನ, ಪ್ರಸರಣ ಇಂದಿನ ವಿಶ್ವಶಾಂತಿ, ಭಾವೈಕ್ಯತಾ ಸೌಹಾರ್ದಕ್ಕೆ ಒಂದು ಕಾರಣ. ಹಾಗಾದಾಗ ಅಂದು ನಿಜವಾದ ತಿರುನಾಳ್.



# ಗಂಗಾನದಿಯ ದೇವತ್ವ

---ಅನಂತ ಚಿಂತಾಮಣಿ ಜ್ಯೋತಿಷೀ.

ಆರ್ಯ ಸಂಸ್ಕೃತಿಯಲ್ಲಿ ಗಾಯತ್ರೀ ಗೀತಾ ಮತ್ತು ಆಕಳಿಗೆ ಇರುವ ಸ್ಥಾನವು ಗಂಗಾ ನದಿಗೂ ಇದೆ. ಮಹಾಭಾರತದಲ್ಲಿ ಗಂಗೆಯನ್ನು ತ್ರಿಪಥಗಾಮಿನಿ ಎಂದು ಕರೆದರೆ ವಾಲ್ಮೀಕಿಯ ರಾಮಾಯಣದಲ್ಲಿ ತ್ರಿಪಥಗಾ ಎಂದಿದೆ.

ಗಂಗಾ ತ್ರಿಪಥಗಾ ನಾಮ<br>
ದಿವ್ಯಾ ಭಾಗೀರಥೀತಿ ಚ<br>
ತ್ರೀನ್ ಪಥೋ ಭಾವಯಂತೀತಿ<br>
ತಸ್ಮಾತ್ ತ್ರಿಪಥಗಾ ಸ್ಮೃತಾ

ವಾ.ರಾ. ೧-೪೪-೬

ರಘುವಂಶ ಕುಮಾರಸಂಭವ ಶಾಕುಂತಲ ನಾಟಕದಲ್ಲಿ ಗಂಗೆಗೆ ತ್ರಿಸ್ರೋತಾ ಎಂಬ ಹೆಸರು ಇದೆ.

ಈ ತ್ರಿಪಥಗೆಯು ಸ್ವರ್ಗಲೋಕ ಮೃತ್ಯುಲೋಕ ಮತ್ತು ಪಾತಾಲಲೋಕವನ್ನು ಪವಿತ್ರಗೊಳಿಸುತ್ತ ಹರಿಯುತಿಹಳು. "ಬ್ರಹ್ಮನ್ ವಿಷ್ಣುಪದೀ ಗಂಗಾ ತ್ರೈಲೋಕ್ಯಂ ವಾಪ್ಯತಿಷ್ಠತಿ". ವಿಷ್ಣು ಧರ್ಮೋತ್ತರ ದಲ್ಲಿ ಗಂಗೆಯ ತ್ರೈಲೋಕ್ಯ ವ್ಯಾಪಿನಿ ಎಂದಿದೆ. ಶಿವಸ್ವರೋದಯದಲ್ಲಿ ಇಡಾನಾಡಿಯನ್ನು ಗಂಗೆ ಎಂದು ಕರೆಯಲಾಗಿದೆ.

ಪಾಪಬುದ್ಧಿಂ ಪರಿತ್ಯಜ್ಯ<br>
ಗಂಗಾಯಾಂ ಲೋಕಮಾತರಿ<br>
ಸ್ನಾನಂ ಕುರುತ ಹೇ ಲೋಕಾ<br>
ಯದಿ ಸದ್ಗತಿಮಿಚ್ಛಥ

ಪದ್ಮಪುರಾಣ ೭-೯-೫೭ ರಲ್ಲಿ ಈ ಮೇಲಿನ ಶ್ಲೋಕದಲ್ಲಿ ಗಂಗೆಯನ್ನು ಲೋಕಮಾತೆ ಎಂದು ಕರೆದಿರುವರು. ತೈತ್ತಿರೀಯ ಆರಣ್ಯಕ ಹಾಗೂ ಕಾತ್ಯಾಯನ ಶ್ರೌತಸೂತ್ರದಲ್ಲಿ ಗಂಗೆಯ ಉಲ್ಲೇಖ ಇದೆ. ವೇದೋತ್ತರ ಕಾಲದಲ್ಲಿ ಗಂಗೆಗೆ ಹೆಚ್ಚಿಗಿನ ಪ್ರತಿಷ್ಠೆ ಪ್ರಾಪ್ತವಾಗಿದೆ. ಪುರಾಣಗಳೆಲ್ಲವೂ ಗಂಗೆಗೆ ಪೂಜ್ಯಸ್ಥಾನ ನೀಡಿವೆ.

ವಾಲ್ಮೀಕಿಯ ರಾಮಾಯಣದ ಅನುಸಾರವಾಗಿ ಗಂಗೆಯ ಉತ್ಪತ್ತಿ ಹಿಮಾಲಯ ಪತ್ನಿ ಮೈನಾಳಿಂದ ಆಯಿತು. ಗಂಗೆಯು ಉಮೆಗಿಂತ ಹಿರಿಯಳು. ಪೂರ್ವಜರ ಉದ್ಧಾರಕಾಗಿ ಭಗೀರಥನ ಕಠಿಣ ತಪಸ್ಸಿಗೆ ಬ್ರಹ್ಮನು ಪ್ರಸನ್ನನಾದನು. ಗಂಗೆಯನ್ನು ಧರಿಸಲು ಭಗೀರಥ ಮಾಡಿದ ತಪಸ್ಸಿಗೆ ಶಿವನು ಪ್ರತ್ಯಕ್ಷನಾಗಿ ಸಂತುಷ್ಟಗೊಳಿಸಿದನು. ಒಂದು ಪಕ್ಷದ ತನಕ ಶಿವನ ಜಟೆಯಲ್ಲಿದ್ದು ಕೊನೆಗೆ ಪ್ರಸನ್ನನಾದ ಶಿವನು ಜಟೆಯ ಒಂದು ಭಾಗದಿಂದ ಗಂಗಾಧಾರೆಯನ್ನು ಹರಿಸಿದನು. ದೇವನದಿ ಗಂಗೆಯು ಭಗೀರಥನ ಹಿಂದೆ ಬರಹತ್ತಿ ಕಪಿಲ ಮುನಿಗಳ ಆಶ್ರಮದತ್ತ ಪ್ರವೇಶಿಸಿ ಸಗರ ಪುತ್ರರನ್ನು ಉದ್ಧಾರಗೊಳಿಸಿತು.

ದೇವಿಭಾಗವತದಂತೆ ವಿಷ್ಣುವಿಗೆ ಮೂವರು ಹೆಂಡಂದಿರು. ಕಲಹದ ಕಾರಣದಿಂದ ಪರಸ್ಪರ ಶಾಪವರರಾಗಿ ಗಂಗೆ - ಸರಸ್ವತಿಯು ನದಿರೂಪದಲ್ಲಿ ಭೂಮಿಯ ಮೇಲೆ ಬರುವಂತಾಯಿತು. ಗಂಗೆಯು ಅವತರಿಸಿ ಪತಿತಪಾವನೆಯಾದಳು.

ಗಂಗೇ ಯಾಸ್ಯಾಸಿ ಪಶ್ಚಾತ್ತ್ವ<br>
ಮಂಶೇನ ವಿಶ್ವಪಾವನೀ<br>
ಭಾರತಂ ಭಾರತೀ ಶಾಪಾತ್<br>
ಪಾಪದಾಹಾಯ ಪಾಪಿನಾಮ್<br>
ಭಗೀರಥಸ್ಯ ತಪಸಾ<br>
ತೇನ ನೀತಾ ಸುಕಲ್ಪಿತೇ

ದೇವಿಭಾಗವತ ೯-೬-೪೯-೫೦

ಸತ್ಯವಾದಿ ನೃಪ ಹರಿಶ್ಚಂದ್ರ ವಂಶದಲ್ಲಿ ಅನೇಯ ಪೀಳಿಗೆಯಲ್ಲಿ ಸಗರನ ಜನ್ಮವಾಯಿತು. ಕಾಶಿಯ ಗಂಗೆಯ ಘಟ್ಟದ ಮೇಲೆ (ಪ್ರಸ್ತುತ ಹರಿಶ್ಚಂದ್ರ ಘಾಟದ ಮೇಲೆ) ರಾಜಾ ಹರಿಶ್ಚಂದ್ರನು ಚಂಡಾಲನ ದಾಸ್ಯಕರ್ಮ ಮಾಡಿದನು. ಹಿಂದಿನಿಂದ ವಿದ್ಯಮಾನವಾದ ಗಂಗೆಯನ್ನು ಭಗೀರಥನು ಏತಕ್ಕೆ ತಂದನು ಎಂಬ ಪ್ರಶ್ನೆಯು ಏಳುತ್ತದೆ. ಸ್ಕಂದಪುರಾಣದ ಕಾಶೀಖಂಡದ ಈ ಶ್ಲೋಕಗಳು ಶಂಕಾಸಮಾಧಾನವನ್ನು ಮಾಡುತ್ತದೆ.

ತ್ರಯಾಣಾಮಪಿ ಲೋಕಾನಾಂ<br>
ಹಿತಾಯ ಮಹತೇ ನೃಪಃ<br>
ಸಮಾನೈಷೀತ್ತತೋ ಗಂಗಾಂ<br>
ಯತ್ರಾಸೀನ್ ಮಣಿಕರ್ಣಿಕಾ<br>
ಪ್ರಾಪ್ಯೇವ ಮುಕ್ತಿಃ ಸಂಸಿದ್ಧಾ<br>
ಗಂಗಾ ಸಂಗಾತ್ ತತೋಽಧಿಕಾ<br>
ಯದಾ ಪ್ರಭೃತಿ ಸಾ ಗಂಗಾ<br>
ಮಣಿಕರ್ಣ್ಯಾ ಸಮಾಗತಾ

ಮೂರು ಲೋಕಗಳ ಮಹಾನ್ ಕಲ್ಯಾಣದ ಸಲುವಾಗಿ ರಾಜಾ ಭಗೀರಥನು ಗಂಗೆಯನ್ನು ಭೂಮಿಯ ಮೇಲೆ ತಂದನು. ಇಲ್ಲಿಯೇ ಎಲ್ಲರಿಗೆ ಮುಕ್ತಿ ಕೊಡಲು ಮಣಿಕರ್ಣಿಕೆ ಮೊದಲಿನಿಂದ ವಿರಾಜಮಾನವಾಗಿದೆ. ಇಂದು ಗಂಗೆಯಿಂದ ಪ್ರಭಾವ ಹೆಚ್ಚಿದೆ.

ಶ್ರೀಮದ್ಭಾಗವತದ ಪಂಚಮ ಸ್ಕಂದದ ಸಂಗತಿ ಇಂತಿದೆ. ರಾಜಾ ಬಲಿಯಿಂದ ಮೂರು ಹೆಜ್ಜೆ ಭೂಮಿಯನ್ನು ಕೊಳ್ಳುವಾಗ ಭಗವಾನ್ ವಾಮನನ ಎಡಗಾಲು ಬ್ರಹ್ಮಾಂಡದ ಮೇಲೆ ಹೋಯಿತು. ಅಲ್ಲಿ ಬ್ರಹ್ಮಾಜಿಯ ಮೂಲಕ ಭಗವಂತನ ಪಾದ ಪ್ರಕ್ಷಾಲನದ ನಂತರ ಅವನ ಕಮಂಡಲುವಿನಲ್ಲಿ ಜಲಧಾರೆಯಿದ್ದು ಚರಣಸ್ಪರ್ಶದಿಂದ ಪುನೀತಗೊಂಡು ಧ್ರುವಲೋಕದಲ್ಲಿ ಹರಿದು ೪ ಭಾಗಗಳಲ್ಲಿ ವಿಂಗಡವಾಯಿತು. ಸೀತಾ, ಅಲಕಾನಂದಾ ಚಕ್ಷು, ಭದ್ರಾ - ಇವೇ ೪ ಭಾಗಗಳು. ಸೀತೆಯು ಬ್ರಹ್ಮಲೋಕದಿಂದ ಹೋಗಿ ಗಂಧಮಾದನ ಶಿಖರದ ಮೇಲೆನಿಂದ ಜಾರುತ್ತ ಪೂರ್ವದತ್ತ ಹರಿಯಿತು. ಅಲಕನಂದೆಯು ಅನೇಕ ಪರ್ವತ ಶಿಖರಗಳನ್ನು ದಾಟುತ್ತ ಹೇಮಕೂಟದಿಂದ ಜಾರಿ ದಕ್ಷಿ

ಗಂಗೋತ್ರಿಯಲ್ಲಿ ಪರ್ವತ ಪಾದದಲ್ಲಿ ಹುಟ್ಟಿದಂತೆ ಕಂಡುಬಂದರೆ ಹಿಮಾಲಯದ ಗಿರಿ ಶಿಖರಗಳ ಶಿವ ಜಟಾಜೂಟದಲ್ಲಿ ಅಲ್ಲಲ್ಲಿ ಸುಳಿದು ಸುತ್ತಿ, ಹರಿದ್ವಾರದ ನಂತರದ ಬಯಲಿನಲ್ಲಿ ಇಡೀ ಹಿಮಾಲಯವೇ ಧ್ಯಾನಸ್ಥ ಋಷಿಯಂತೆ ಕಂಡುಬಂದು ಬಯಲಿಗೆ ಬರುವ ಗಂಗಾನದಿಯನ್ನು - ಹರಿಯ ಅಡಿಯಿಂದ, ಹರನ ಜಡೆಯಿಂದ, ಋಷಿಯ ತೊಡೆಯಿಂದ ಇಳಿದು ಬಾ ತಾಯಿ ಎನ್ನುತ್ತ ಗಂಗಾವತರಣವನ್ನು ಚಿತ್ರಿಸಿದರು ಕನ್ನಡದಲ್ಲಿ ಬೇಂದ್ರೆ. ಆಕೆಯ ದೇವತ್ವವನ್ನಿಲ್ಲಿ ವಿವಿಧ ಪುರಾಣೋಕ್ತ ಆಧಾರಗಳಿಂದ ಮನದಟ್ಟು ಮಾಡಿಕೊಡಲು ಪ್ರಯತ್ನಿಸಿದ್ದಾರೆ ಅನಂತ ಚಿಂತಾಮಣಿ ಜ್ಯೋತಿಷೀ.

ಣದಲ್ಲಿ ಭಾರತವರ್ಷಕ್ಕೆ ಬಂದಿತು. ಚಕ್ಷುನದಿಯು ಮಾಲ್ಯವಾನ್ ಶಿಖರದಿಂದ ಹೋಗಿ ಕೇತುಮಾಲ ವರ್ಷದ ಮಧ್ಯದಿಂದ ಹೋಗಿ ಪಶ್ಚಿಮದತ್ತ ಹರಿಯಿತು. ಭದ್ರಾನದಿಯು ಗಿರಿ ಶಿಖರದತ್ತ ಹರಿದು ಉತ್ತರ ಕುರುವರ್ಷದ ಮಧ್ಯದಿಂದ ಉತ್ತರ ದಿಶೆಗೆ ಹರಿಯಿತು.

ವಿಂಧ್ಯಗಿರಿಯ ಉತ್ತರಭಾಗದಲ್ಲಿ ಭಾಗೀರಥಿ ಗಂಗೆ ಎಂದು ಕರೆದರೆ ದಕ್ಷಿಣ ಭಾಗದಲ್ಲಿ ಗೌತಮೀ ಗಂಗೆ ಗೋದಾವರಿ ಎನ್ನುವರು.

ಭಾರತೀಯ ಸಾಹಿತ್ಯದಲ್ಲಿ ಗಂಗಾವತರಣದ ತಿಥಿಗಳು ಎರಡು ಇವೆ. ಆದಿತ್ಯ ಪುರಾಣದಲ್ಲಿ ವೈಶಾಖ ಶುಕ್ಲ ತೃತಿಯಾ ಎಂದಿದೆ. ಸ್ಕಂದ ಪುರಾಣದಲ್ಲಿ ಜ್ಯೇಷ್ಠ ಶುಕ್ಲ ಪಕ್ಷದ ಹಸ್ತಾ ನಕ್ಷತ್ರ ಬುಧವಾರ ಯುಕ್ತ ದಶಮೀ ತಿಥಿ ಹೇಳಿದೆ. ಎಲ್ಲೆಡೆಗೆ ಜ್ಯೇಷ್ಠ ಶುದ್ಧ ದಶಮೀಯಂದು ಗಂಗಾವತರಣ ದಿವಸವೆಂದು ಭಾವಿಸಿ ಗಂಗಾ ಪೂಜನಗೈದು ಪಾಪಮುಕ್ತರಾಗುವರು. ಜ್ಯೇಷ್ಠ ಶುದ್ಧ ಪ್ರತಿಪದೆಯಿಂದ ಪ್ರಾರಂಭವಾದ ಗಂಗಾದಶಹರಾ ದಶಮೀ ದಿನ ಮುಗಿಯುತ್ತದೆ.

ಗಂಗಾಜಲವೂ ಶಾರೀರಕ, ಮಾನಸಿಕ ಕ್ಲೇಶಗಳಿಗೆ ಪೂರ್ಣತಃ ವಿನಾಶಕವಾಗಿದೆ. ಗಂಗೆಯ ಆಶ್ರಯದಿಂದ ಮಾನವರಿಗೆ ಭೌತಿಕ ಉನ್ನತಿ ಅಲ್ಲದೇ ಮಾನವತೆಗೆ ಆಧ್ಯಾತ್ಮಿಕ ಉನ್ನತಿ ಮಾಡಿಕೊಡುತ್ತದೆ. ವಿಲಂಬ ಸದ್ಗತಿಯ ಇಚ್ಛಿಸುವರಿಗೆ ಗಂಗೆಯು ಒಂದು ತೀರ್ಥವಾಗಿದೆ. ಇದರ ದರ್ಶನ ಮಾತ್ರದಿಂದ ಎಲ್ಲ ಪಾಪಗಳು ನಾಶವಾಗುತ್ತವೆ. ಗಂಗೆಯ ನಾಮಸ್ಮರಣದಿಂದ ಪಾತಕ ಕೀರ್ತನದಿಂದ ಅತಿಪಾತಕ ದರ್ಶನದಿಂದ ಮಹಾಪಾತಕಗಳು - ನಾಶವಾಗುತ್ತವೆ. ಗಂಗಾ ಜಲದ ಸ್ಪರ್ಶದಿಂದ ಮಾನವರ ಎಲ್ಲಾ ಪಾಪಗಳು ಒಂದೇ ಕ್ಷಣದಲ್ಲಿ ನಾಶವಾಗುತ್ತವೆ. ನೂರಾರು ಯೋಜನಗಳ ದೂರದಿದ್ದರೂ ಗಂಗಾ ಗಂಗಾ ಎಂದು ಹೇಳುತ್ತಿದ್ದರೆ ಎಲ್ಲ ಪಾಪಗಳಿಂದ ಬಿಡುಗಡೆಹೊಂದಿ ವಿಷ್ಣು ಲೋಕ ಪ್ರಾಪ್ತವಾಗುತ್ತವೆ. ಗಂಗೆಯು ಭಗವಾನನ ಚರಣಕಮಲದಿಂದ ಹೊರಬಂದಿದೆ. ಶ್ರದ್ಧೆಯಿಂದ ಚಿಂತನ ಮಾಡಿ ದೊಡ್ಡ ದೊಡ್ಡ ಮುನಿಗಳು ನಿರ್ಮಲರಾಗುವರು. ಮೂರು ಗುಣಗಳ ಕಠಿಣ ಬಂಧನವನ್ನು ಹರಿದೊಗೆದು ತುರಂತ ಭಗವಾನ್ ಸ್ವರೂಪ ಹೊಂದುವರು. ಹೀಗಿದೆ ಗಂಗೆಯ ದೇವತ್ವ ಮಹಿಮೆ.



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೇಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿ ದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು | | |
| ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

# ನಾರಾಯಣ ಮಹಿಮೆ

---ಕೆ. ಆರ್. ಗೋಪಾಲಕೃಷ್ಣ.

ಈ ಕಲಿಯುಗದಲ್ಲಿ ಕಲಿಕಲ್ಮಷ ದೋಷದಿಂದ ಮಾನವನು ಅನೇಕ ಕಷ್ಟಕಾರ್ಪಣ್ಯ ಸಂಕಷ್ಟಗಳಿಗೆ ಒಂದಲ್ಲ ಇನ್ನೊಂದು ಸಂದರ್ಭದಲ್ಲಿ ಬಲಿಯಾಗ ಲೇಬೇಕಾಗಿರುತ್ತದೆ. ಈ ಕಷ್ಟಸಂಕೋಲೆಗಳಿಂದ - ಬಿಡಿಸಿಕೊಳ್ಳಲು ಕೇವಲ ಹಣ,ಶಕ್ತಿ ಅಥವಾ ಇತರೆ ಯಾವ ಪ್ರಭಾವದಿಂದಲೂ - ಪಾರಾಗಲು ಮಾಡುವ ಪ್ರಯತ್ನ ವ್ಯರ್ಥವಷ್ಟೆ! ಹಾಗೇನಾದರೂ ಈ ಬಂಧನದಿಂದ ಮುಕ್ತನಾಗಬೇಕಾದರೆ, ಒಂದು ಉಪಾಯ ಉಂಟು. ನಾರಾಯಣನ ಸ್ತೋತ್ರ ಮಾಡುವುದರಿಂದ ಸರ್ವ ಬಾಧೆಗಳಿಂದ ನಿವೃತ್ತಿ ಹೊಂದಿ ಶ್ರೀ ಕೃಷ್ಣಸಾಯುಜ್ಯವನ್ನು ಹೊಂದುವುದ ರಲ್ಲಿ ಸಂಶಯವಿಲ್ಲ.

ಶ್ರೀಪಾದರಾಜರು ಅಪ್ಪಣೆ ಕೊಡಿಸಿರುವಂತೆ ಕೃತ ಯುಗದಲ್ಲಿ ಉಗ್ರತಪಸ್ಸಿಗೆ ಆದ್ಯತೆಯಿತ್ತು. ತ್ರೇತಾ ಯುಗದಲ್ಲಿ ಯಜ್ಞಯಾಗಕ್ಕೆ ಪ್ರಾಶಸ್ತ್ಯ. ದ್ವಾಪರ ಯುಗದಲ್ಲಿ ಪರಾಕಾಷ್ಠೆ ಭಕ್ತಿ ಮತ್ತು ಕಲಿಯುಗದಲ್ಲಿ ಮಾತ್ರ ಇದಾವುದೂ ಅನಗತ್ಯ. ಕೇವಲ ನಾರಾಯ ಣನ ಸ್ಮರಣೆ ಒಂದೇ ಸಾಕು ಎಂದಿದ್ದಾರೆ.

ಇದರಂತೆ ಅನೇಕ ಹರಿದಾಸರುಗ್ಗಳು, ಗುರು ಗಳು, ಸನ್ಯಾಸಿಗಳು, ಯಕ್ಷರು, ಕಿನ್ನರು, ಕಿಂಪುರು ಷರಾದಿಯಾಗಿ ಅನೇಕ ಭಾಗವತೋತ್ತಮರುಗಳು ಅವರದೇ ಆದ ಅನುಭವ, ಅನುಷ್ಠಾನದಿಂದ ಹಾಗೂ ಉತ್ತಮ ದೃಷ್ಟಿಕೋನದಿಂದ ತಾವು ಸಾಧಿಸಿ ಕೊಂಡಂತಹ ನಿಧಿಯಾಗಿರುವ ಶ್ರೀ ಪರಮಾತ್ಮಸಾ ಕ್ಷಾತ್ಕಾರದ ಅನುಭವಾಮೃತವನ್ನು ಈ ಲೋಕದ ನಮ್ಮಂತಹ ಪಾಮರುಗಳಿಗೆ ತಿಳಿಸಿರುವರು. ಅವರ ಅನುಭವದ ದಾರಿಯಲ್ಲಿ ನಾವು ನಡೆದರೆ ಸರ್ವೋ ತ್ಕೃಷ್ಟ ಮುದ ಕೊಡುವ ಮಾರ್ಗವಾಗುವುದರಲ್ಲಿ ಸಂದೇಹವಿಲ್ಲ.

ಶ್ರೀ ಮದ್‌ಭಾಗವತದ "ಪಾಂಡವಗೀತೆ"ಯಲ್ಲಿ ಪಂಚಪಾಂಡವರು ಅಲ್ಲದೇ ಅನೇಕ ಭಾಗವತ ಭಕ್ತಾಗ್ರೇಸರುಗಳು ತಮ್ಮ ಅಮೃತಸಾದೃಶ ಬಿಂದುಗ ಳಿಂದ ಶ್ರೀಮನ್ನಾರಾಯಣನ ಹಿರಿಮೆಯನ್ನು ಹಾಡಿ ಹೊಗಳಿರುವರು.

ದಾಲ್ಭ್ಯ ಋಷಿಗಳ ಉಕ್ತಿಯಂತೆ--

ಕಿಂ ತಸ್ಯ ಬಹುಭಿರ್ಮಂತ್ರೈಃ
ಭಕ್ತಿರ್ಯಸ್ಯ ಜನಾರ್ದನೇ
ನಮೋ ನಾರಾಯಣಾಯೇತಿ
ಮಂತ್ರಸ್ಸರ್ವಾರ್ಥಸಾಧಕಃ

ವಿಷ್ಣುವಿನಲ್ಲಿ ಭಕ್ತಿ ಮಾಡುವ ಮನುಷ್ಯರಿಗೆ ಅನೇಕ ಮಂತ್ರಗಳಿಂದ ಯಾವ ಪ್ರಯೋಜನ ವಿಲ್ಲ, ಆದರೆ ಓಂ ನಮೋ ನಾರಾಯಣಾಯ ಎಂಬ ಮಂತ್ರವೇ ಪ್ರಪಂಚದಲ್ಲಿ ಎಲ್ಲವನ್ನು ಸಾಧಿಸತಕ್ಕ ಮಾರ್ಗವಾಗಿದೆ ಎಂದಿದ್ದಾರೆ.

ಪುಲಸ್ತ್ಯ ಮಹರ್ಷಿಗಳು - ನಾಲಗೆಯು ಸದಾ ರಸ ಗಳ ಸಾರ ಮತ್ತು ಸಿಹಿಯನ್ನು ಹೀರುವುದರಲ್ಲಿ ಮಗ್ನ ವಾಗಿರದೇ ಸದಾ ಅಮೃತದಂತಹ ನಾರಾಯಣನ ನಾಮವನ್ನು ಉಚ್ಚರಿಸುವಂತೆ ಜನತೆಗೆ ತಿಳಿಸಿ ಉಪ ಕಾರ ಮಾಡಿರುತ್ತಾರೆ.

ಹೇಜಿಹ್ವೇ ರಸಸಾರಜ್ಞೇ
ಸರ್ವದಾ ಮಧುರಪ್ರಿಯೆ
ನಾರಾಯಣಾಖ್ಯ ಪೀಯೂಷಂ
ಪಿಬ ಜಿಹ್ವೇ ನಿರಂತರಮ್

ಶ್ರೀಮನ್ ನಾರಾಯಣನ ಅವತಾರರಾದ ಶ್ರೀ ವೇದವ್ಯಾಸರು ವೇದಶಾಸ್ತ್ರಕ್ಕಿಂತ ಉತ್ತಮವಾದದ್ದು, ವಿಷ್ಣುವಿಗಿಂತ ಉತ್ತಮವಾದ ದೇವತೆಯು ಇಲ್ಲ ವೆಂದು ತೋಳನ್ನೆತ್ತಿ ನುಡಿಯುತ್ತಾರೆ.

ಸತ್ಯಂ ಸತ್ಯಂ ಪುನಸ್ಸತ್ಯಂ
ಉದ್ಧೃತ್ಯ ಭುಜಮುಚ್ಯತೇ
ವೇದಶಾಸ್ತ್ರಾತ್ಪರಂ ನಾಸ್ತಿ
ನ ದೈವಂ ಕೇಶವಾತ್ಪರಮ್

ಧನ್ವಂತರೀ ಸ್ವಾಮಿಯು ಸ್ವತಃ ತಾನೇ ಈ ರೀತಿ ಬೋಧಿಸುತ್ತಾ, ಅಚ್ಯುತ, ಅನಂತ, ಗೋವಿಂದ ಎಂಬ ನಾಮಗಳನ್ನು ಹೇಳುವುದೆಂಬ ಔಷಧದಿಂದ ಸಮಸ್ತ ರೋಗಗಳು ನಾಶವಾಗುವುವು ಎಂದು ಸತ್ಯ ಮಾಡಿ ಹೇಳುತ್ತಿದ್ದಾನೆ ಸ್ವಾಮಿ ಎಂದ ಮೇಲೆ ಅವನ ನಾಮದ ಮಹಿಮೆ ಎಷ್ಟು ಹೊಗಳಿದರೂ ಸಾಲದು.

ಅಚ್ಯುತಾನಂತ ಗೋವಿಂದ
ನಾಮೋಚ್ಚಾರಣ ಭೇಷಜಾತ್
ನಶ್ಯಂತಿ ಸಕಲಾ ರೋಗಾಃ
ಸತ್ಯಂ ಸತ್ಯಂ ವದಾಮ್ಯಹಮ್

ಮಾರ್ಕಂಡೇಯ ಮಹಾಮುನಿಗಳು ಹೇಳು ತ್ತಾರೆ- ಸ್ವಲ್ಪ ಹೊತ್ತು ಶ್ರೀವಿಷ್ಣುವನ್ನು ಧ್ಯಾನಿಸದಿರು ವುದೇ ಮಹಾ ಕೇಡು, ದೋಷ, ಅಜಾನ, ಭ್ರಾಂತಿ

ಸಾಹಾನಿಸ್ತನ್ಮಹಚ್ಛಿದ್ರಂ
ಸ ಮೋಹಸ್ಯ ಚ ವಿಭ್ರಮಃ
ಯನ್ಮುಹೂರ್ತಂ ಕ್ಷಣಂ ವಾಪಿ
ವಾಸುದೇವಂ ನ ಚಿಂತಯೇತ್

ಅಗಸ್ತ್ಯ ಮಹರ್ಷಿಗಳು ಹೇಳುತ್ತಾರೆ - ಒಂದು ನಿಮಿಷವೋ ಅಥವಾ ಅರ್ಧ ನಿಮಿಷವೋ ಯಾರು ವಿಷ್ಣುವನ್ನು ಧ್ಯಾನ ಮಾಡುತ್ತಾರೋ ಆ ಜಾಗವು ಕುರುಕ್ಷೇತ್ರವು, ಅದೇ ಪ್ರಯಾಗವು ಮತ್ತು ನೈಮಿಷಾ ರಣ್ಯವಾಗುವುದರಲ್ಲಿ ಸಂದೇಹವಿಲ್ಲ.

ನಿಮಿಷಂ ನಿಮಿಷಾರ್ಧಂ ವಾ
ಪ್ರಾಣಿ ನಾಂ ವಿಷ್ಣುಚಿಂತನಮ್
ಯತ್ರ ಯತ್ರ ಕುರುಕ್ಷೇತ್ರಂ
ಪ್ರಯಾಗೋ ನೈಮಿಷಂ ವನಮ್

ಭಕ್ತ ವಾಮದೇವ ಹೇಳುತ್ತಾರೆ - ಒಂದು ನಿಮಿ ಷವೋ ಅಥವಾ ಅರ್ಧ ನಿಮಿಷವೋ ಶ್ರೀವಿಷ್ಣು ವನ್ನು ಪ್ರತಿದಿನವೂ ಸ್ಮರಿಸಿದರೆ, ಕೋಟಿ ಸಾವಿರ ಯಜ್ಞಗಳಿಗಿಂತ ಶ್ರೇಷ್ಠ.

ನಿಮಿಷಂ ನಿಮಿಷಾರ್ಧಂ ವಾ
ಸ್ಮರೇ ನ್ನಿತ್ಯಂ ಜನಾರ್ದನಮ್
ಕ್ರತುಕೋಟಿ ಸಹಸ್ರೇಭ್ಯೋ
ಧ್ಯಾನ ಮೇಕಂ ವಿಶಿಷ್ಯತೇ

ಶುಕ ಮುನಿಗಳು ಎಲ್ಲಾ ಶಾಸ್ತ್ರವನ್ನು ವಿಮರ್ಶಿಸಿ ನೋಡಿದಾಗ ನಾರಾಯಣನನ್ನೇ ಸದಾ ಧ್ಯಾನಿಸಬೇ ಕೆಂದು ವಚನಕೊಟ್ಟಿರುತ್ತಾರೆ.

ಆಲೋಡ್ಯ ಸರ್ವ ಶಾಸ್ತ್ರಾಣಿ

ನಾರಾಯಣನ ಮಹಿಮೆಗಳನ್ನು ಪುರಾಣಗಳು ಬಹುವಾಗಿ ವರ್ಣಿಸಿವೆ. ಬೇರೆ ಬೇರೆ ಕಾಲದ ಬೇರೆ ಬೇರೆ ವ್ಯಕ್ತಿಗಳು ಆತನ ಮಹಿಮೆಯನ್ನು ಕಂಡ ಬಗೆಯೂ ಅಲ್ಲಲ್ಲಿಯೇ ವರ್ಣಿತವಾಗಿದೆ. ಈ ಲೇಖನದಲ್ಲಿ ಹಲವರು ಕಂಡಂತೆ ಹರಿಮಹಿಮೆಯನ್ನು ಪರಿಚಯಿಸಿ ಕೊಡಲಾಗಿದೆ.

**ವಿಚಾರ್ಯ ಚ ಪುನಃ ಪುನಃ**

**ಇದ ಮೇಕಂ ಸುನಿಷ್ಪನ್ನಂ**

**ಧ್ಯೇಯೋ** ನಾರಾಯಣಸ್ಸದಾ

**ಅದೇ ಶುಕ** ಮುನಿಗಳು ಹೇಳುತ್ತಾರೆ - ಬ್ರಹ್ಮಾದಿದೇವತೆಗಳು ತಪೋನಿರತರಾದ ಮುನಿಗಳೂ ದೇವೋತ್ತಮನಾದ ನಾರಾಯಣನನ್ನು ಶ್ರೇಷ್ಠ ದೇವನೆಂದು ಹೊಗಳುತ್ತಾರೆ.

ಏವಂ ಬ್ರಹ್ಮಾದಯೋ ದೇವಾಃ

ಋಷಯಶ್ಚ ತಪೋಧನಾಃ

ಕೀರ್ತಯಂತಿ ಸುರಶ್ರೇಷ್ಠ

ದೇವಂ ನಾರಾಯಣಂ ಪರಮ್

ಭೃಗು ಮಹರ್ಷಿಗಳು ಆದೇಶಿಸಿರುವಂತೆ ಶ್ರೀಕೃಷ್ಣ ನಾಮದ ಉಚ್ಚಾರಣೆ ಮಾತ್ರದಿಂದಲೇ ಅಷ್ಟಾಂಗಯೋಗಾಭ್ಯಾಸವಿಲ್ಲದೆ ಇದ್ದರೂ ಅವನಲ್ಲಿ ಭಕ್ತಿ ಉಂಟಾಗುವುದು.

ನಾಮ್ನೈವ ತವಗೋವಿಂದ

ನಾಮ ತತ್ವ ಶತಾಧಿಕಮ್

ದದಾತ್ಯುಚ್ಚಾರಣೇ ಭಕ್ತಿಂ

**ವಿನಾಪ್ಯಷ್ಟಾಂಗಯೋಗತಃ**

**ಅರುಂಧತೀ** ದೇವಿಯರ (ಸಪ್ತ ಋಷಿಯರೊಬ್ಬ**ರಾದ ವಸಿಷ್ಠ** ಋಷಿಯ ಪತ್ನಿ) ಪ್ರಕಾರ ಶ್ರೀಕೃಷ್ಣನನ್ನು **ಸ್ಮರಿಸುವುದರಿಂದ** ಪಾಪ ಸಮೂಹವು ವಜ್ರಾಯು**ಧದಿಂದ** ಹೊಡೆಯಲ್ಪಟ್ಟ ಬೆಟ್ಟದಂತೆ ಹುಡಿಯಾಗು**ವುದು.**

ಕೃಷ್ಣಾನುಸ್ಮರಣಾ ದೇವ

ಪಾಪ ಸಂಘಾತ ಪಂಜರಮ್

ಶತಧಾ ಭೇದ ಮಾಪ್ನೋತಿ

ಗಿರಿರ್ವಜ್ರ ಹತೋ ಯಥಾ

ಅತ್ರಿಗಳು ಹೇಳುತ್ತಾರೆ,

ಗೋವಿಂದೇತಿ ಸದಾ ಸ್ನಾನಂ

ಗೋವಿಂದೇತಿ ಸದಾ ಜಪಃ

ಗೋವಿಂದೇತಿ ಸದಾ ಧ್ಯಾನಂ

ಸದಾ ಗೋವಿಂದ ಕೀರ್ತನಮ್

ಭಕ್ತ ಪ್ರಹ್ಲಾದರು ನೃಸಿಂಹಸ್ವಾಮಿಯನ್ನು ಸ್ತೋತ್ರ ಮಾಡುತ್ತಾ, ತಾನು ಪಶು, ಪಕ್ಷಿ ಮುಂತಾದ ಯಾವ ಪ್ರಾಣಿ ಜಾತಿಯಲ್ಲಾದರೂ ಜನಿಸಿದರೂ ಪರವಾಗಿಲ್ಲ, ಆದರೆ ಆಗಲೂ ತನಗೆ ನಾರಾಯಣನಲ್ಲಿ ಸದಾ ಭಕ್ತಿ ಇರಲೆಂದು ಪ್ರಾರ್ಥಿಸುತ್ತಾರೆ.

ನಾಥಯೋನಿ ಸಹಸ್ರೇಷು,

ಯೇಷು ಯೇಷು ವ್ರಜಾಮ್ಯಹಮ್

ತೇಷು ತೇಷ್ವ ಚಲಾಭಕ್ತಿಃ

ಅಚ್ಯುತಾಸ್ತು ಸದಾತ್ವಯಿ

ಭಕ್ತ ಘಟೋತ್ಕಚ ಹೇಳುತ್ತಾನೆ, ನೃಸಿಂಹರೂಪಿಯೂ ಗರುಡಧ್ವಜನೂ, ತಾಪತ್ರಯಗಳನ್ನು ಪರಿಹರಿಸುವವನೂ ಸಂಸಾರವನ್ನು ನೀಗಿಸುವವನೂ, ಆಶೆ, ಶತ್ರು, ಚೇಳು, ನೀರು, ಬೆಂಕಿ, ಹಾವು, ರೋಗ ಇವುಗಳಿಂದುಂಟಾದ ದುಃಖವನ್ನು ಪರಿಹರಿಸುವವನೂ, ಗುರುವೂ ಆದ ಶ್ರೀಕೃಷ್ಣನೇ, ನಿನಗೆ ನಮಸ್ಕಾರ ಎಂದಿದ್ದಾರೆ.

ಶ್ರೀಮನ್ನೃಸಿಂಹ ವಿಭವೇ

ಗರುಡಧ್ವಜಾಯ

ತಾಪತ್ರಯೋ ಪಶಮನಾಯ

ಭವೌಷಧಾಯ

ಕೃಷ್ಣಾರಿ ವೃಶ್ಚಿಕ ಜಲಾಗ್ನಿ

ಭುಜಂಗರೋಗ

ಕ್ಲೇಶ ವ್ಯಯಾಯ

ಹರಯೇ ಗುರವೇ ನಮಸ್ತೆ

ದುರ್ಯೋಧನನ ಪ್ರಕಾರ ಅವನಿಗೆ ಧರ್ಮ ಮಾಡಬೇಕು. ಅಧರ್ಮ ಮಾಡಬಾರದೆಂಬ ಇಚ್ಛೆ, ಪ್ರಜ್ಞೆಗಿಂತ, ತನ್ನ ಮನಸ್ಸಿನಲ್ಲಿರುವ ಶ್ರೀಕೃಷ್ಣನ ಅಪೇಕ್ಷೆಯಂತೆ ನಡೆಯುತ್ತೇನೆಂದು ಹೇಳಿರುವನು.

ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿಃ

ಜಾನಾಮ್ಯಧರ್ಮಂ ನ ಚಮೇ ನಿವೃತ್ತಿಃ

ಶ್ರೀ ವಾಸುದೇವೇನ ಹೃದಿ ಸ್ಥಿತೇನ

ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ

ಅಶ್ವತ್ಥಾಮಾಚಾರ್ಯ (ರುದ್ರಾಂಶರ ಅವತಾರ) ನೃಸಿಂಹರೂಪಿಯಾದ ಕೃಷ್ಣನನ್ನು ಮನಃ ಪೂರ್ವಕವಾಗಿ ಈ ಧ್ಯಾನ, ಸ್ತೋತ್ರದಿಂದ ವಂದಿಸುತ್ತಿರುವರು--

ಗೋವಿಂದ ಕೇಶವ ಜನಾರ್ದನ ವಾಸುದೇವ

ವಿಶ್ವೇಶ ವಿಶ್ವ ಮಧು ಸೂದನ ವಿಶ್ವರೂಪ

ಶ್ರೀಪದ್ಮನಾಭ ಪುರುಷೋತ್ತಮ ಪುಷ್ಕರಾಕ್ಷ

ನಾರಾಯಣಾಚ್ಯುತ ನೃಸಿಂಹ ನಮೋ ನಮಸ್ತೇ

ದ್ರೋಣಾಚಾರ್ಯರು ಕೃಷ್ಣ ಭಗವಾನನನ್ನು ಹೊಗುಳುತ್ತಾ ಕೃಷ್ಣ ಪರಮಾತ್ಮನ ಕೋಪದಿಂದ ಹತರಾಗಿರುವರಿಗೆ ನಿಶ್ಚಯ ಸ್ವರ್ಗ ಲೋಕ ಪ್ರಾಪ್ತಿ ಎಂದಿದ್ದಾರೆ.

ಯೇ ಯೇ ಹತಾಶ್ಚ ಕಥರೇಣರಾಜನ್

ತ್ರೈಲೋಕ್ಯ ನಾಥೇನ ಜನಾರ್ದನೇನ

ತೇ ತೇ ಗತಾಃ ತನ್ನಿಲಯಂ ಮುರಾರೇಃ

ಕ್ರೋಧೋಽಪಿ ದೇವಸ್ಯ ವರೇಣತುಲ್ಯಃ

ಇಂದ್ರದೇವರು ನಿಂದಾಸ್ತುತಿಯಿಂದ ಶ್ರೀಮನ್ ನಾರಾಯಣನನ್ನು ಸ್ಮರಿಸಿದ ಮಾತ್ರಕ್ಕೆ ನಮ್ಮ ಪಾಪ ರಾಶಿಯನ್ನೇ ಕದಿಯುವ ಕಳ್ಳನೆಂಬುದಾಗಿ ಪ್ರಾರ್ಥಿಸಿದ್ದಾರೆ.

ನಾರಾಯಣೋ ನಾಮ ನರೋ ನರಾಣಾಂ

ಪ್ರಸಿದ್ಧ ಚೋರಃ ಕಥಿತಃ ಪೃಥಿವ್ಯಾಂ

ಅನೇಕ ಜನ್ಮಾರ್ಜಿತ ಪಾಪ ಸಂಚಯಂ

ಹರತ್ಯಶೇಷಂ ಸ್ಮೃತ ಮಾತ್ರ ಏವ

ದ್ರೌಪದೀ ದೇವಿಯರು (ಭಾರತೀ ದೇವಿಯರ ಅಂಶ) ತಾವು ಕೀಟ, ಹಕ್ಕಿ, ಮೃಗ, ಹಾವು ಏನಾಗಿದ್ದರೂ ನಿನ್ನ ಅನುಗ್ರಹದಿಂದ ನಿನ್ನಲ್ಲಿ ಸದಾ ಸ್ಥಿರಭಕ್ತಿ ಇರಲೆಂದು ಪ್ರಾರ್ಥಿಸುತ್ತಾರೆ.

ಕೀಟೇಷು ಪಕ್ಷಿಷು ಮೃಗೇಷು ಸರೀಸೃಪೇಷು

ರಕ್ಷಃ ಪಿಶಾಚಂ ಅನು ಜೇಷ್ಟಪಿ ಯತ್ರಯತ್ರ

ಜಾತೇಽಪಿ ಸಂಭವತು ಕೇಶವ ತೇ ಪ್ರಸಾದಾ-

ತ್ತಯ್ಯೇವ ಭಕ್ತಿಃ ಅಚಲಾವ್ಯಭಿಚಾರಿಣೀ ಚ

ಇದೇ ರೀತಿಯಲ್ಲಿ ಮಹಾಭಾರತದ ಕಥೆಯಲ್ಲಿ ಬರುವ ಪಾತ್ರವರ್ಗದ ಭಾಗವತರೆಲ್ಲರೂ ಶ್ರೀಮನ್ನಾರಾಯಣನನ್ನು ಪ್ರಾರ್ಥಿಸಿದ್ದಾರೆ. ಅಭಿಮನ್ಯು ದೇವರನ್ನು ಪ್ರಾರ್ಥಿಸುವ ಈ ರೀತಿಯಲ್ಲಿ ಸದಾ ಸ್ಮರಿಸುವಂತಹ ಉತ್ತಮ ಭಾಗವತೋತ್ತಮ ಸತ್ಪುರುಷರಾಗಿರುತ್ತಾರೆ.

ಗೋವಿಂದ ಗೋವಿಂದ ಹರೇ ಮುರಾರೇ

ಗೋವಿಂದ ಗೋವಿಂದ ರಥಾಂಗ ಪಾಣೇ

ಗೋವಿಂದ ಗೋವಿಂದ ಮುಕುಂದ ಕೃಷ್ಣ

ಗೋವಿಂದ ಗೋವಿಂದ ನಮೋ ನಮಸ್ತೆ

ಈ ರೀತಿಯಲ್ಲಿ ಎಲ್ಲಾ ಯುಗಗಳಲ್ಲಿಯೂ ಪ್ರತಿಯೊಬ್ಬರೂ ಸದಾ ನಾರಾಯಣನನ್ನು ಸ್ಮರಿಸುತ್ತಿರುವಾಗ ಕೇವಲ ಅವನ ನಾಮಸ್ಮರಣೆ ಮಾತ್ರದಿಂದ ಕಲಿಯುಗದಲ್ಲಿ ತಮ್ಮ ಬೇಡಿದ ಸಕಲ ಇಷ್ಟಾರ್ಥಗಳನ್ನು ಪಡೆಯುವುದರಲ್ಲಿ ಸಾಫಲ್ಯ ಹೊಂದುವರು. ಹರಿಕಥಾಮೃತಸಾರದಲ್ಲಿ ಜಗನ್ನಾಥದಾಸಾರ್ಯರು ಹೇಳಿರುವಂತೆ,

ಮಲಗಿ ಪರಮಾದರದಿ ಪಾಡಲು

ಕುಳಿತು ಕೇಳುವ, ಕುಳಿತು ಪಾಡಲು

ನಿಲುವ, ನಿಂತರೆ ನಲಿವ,

ನಲಿದರೆ ಒಲಿವೆ ನಿಮಗೆಂಬ

ಸುಲಭನೋಹರಿ ತನ್ನವರ ನರ -

ಘಳಿಗೆ ಬಿಟ್ಟಗಲನು ರಮಾಧವ

ನೊಲಿಸಲರಿಯದೆ ಪಾಮರರು

ಬಳಲುವರು ಭವದೊಳಗೆ

ಎಂಬೀ ಆಪ್ತನುಡಿ ಇದ್ದರೂ ಸಹ ಶ್ರೀಮನ್ ನಾರಾಯಣನು ನಮ್ಮ ಕಡೆಗೆ ಗಮನವೀಯುವುದಕ್ಕೆವಾಗೂ ಅವನ ಕರುಣೆ ಉಂಟಾಗುವುದಕ್ಕೆ ಅವನನ್ನು ದಿನದಲ್ಲಿ ಒಂದು ಘಳಿಗೆ ಯಾದರೂ ಧ್ಯಾನ ಮಾಡಲು, ಸದ್ಬುದ್ಧಿ ಜ್ಞಾನ ಕೊಡುವಂತೆ ಅವನನ್ನೇ ಅನನ್ಯವಾಗಿ ಪ್ರಾರ್ಥಿಸೋಣ! (ಸಾಧಾರ)

|| ಶ್ರೀ ಕೃಷ್ಣಾರ್ಪಣಮಸ್ತು ||

# ಚಂಡರಕಿ ದಾಸರು

---ಹಣಮಂತ ತಾಸಗಾಂವಕರ.

ಹನುಮದ್ದಾಸ ಸಂಭೂತಂ
ಚಂಡ್ರಕಿ ಪುರವಾಸಿನಂ
ಕಾರ್ಪರೇಶ ಪದಾಸಕ್ತಂ
ಜಯಕೃಷ್ಣಗುರುಂ ಭಜೇ

ಕನ್ನಡ ನಾಡಿನ ಧಾರ್ಮಿಕ ಸಾಮಾಜಿಕ ಸಾಂಸ್ಕೃತಿಕ ಸಾಹಿತ್ಯಕ ಕ್ಷೇತ್ರಗಳಿಗೆ ಹರಿದಾಸರ ಕೊಡುಗೆ ಅಮೂಲ್ಯವಾಗಿದೆ. ಸಂಸಾರದಲ್ಲಿದ್ದೂ ಸ್ವಾರ್ಥ ಲೋಭ ಮೋಹ ಮದ ಮತ್ಸರಾದಿಗಳನ್ನು ತೊರೆದು ಶ್ರೀ ಹರಿಯ ಭಕ್ತಿಮಾರ್ಗವನ್ನು ಅನುಸರಿಸಿ ಹರಿದಾಸರೆನಿಸಿ ಲೋಕೋಪಕಾರ ಗೈದವರು "ಹರಿಯೇ ಸರ್ವೋತ್ತಮ, ನಾನು ಅವನ ದಾಸ" ಎಂದು ಸಮರ್ಪಣಾ ಭಾವದಿಂದ ಸಮಾಜದೋನ್ನತಿಗೆ ಪರಿಶ್ರಮಿಸಿದವರು.

ಒಂಭತ್ತನೆಯ ಶತಮಾನಕ್ಕಿಂತಲೂ ಪೂರ್ವದಿಂದಲೇ ಹರಿಯುತ್ತಿರುವ ಈ ಹರಿದಾಸ ಪರಂಪರಾ ವಾಹಿನಿ ತನ್ನ ಶಿಷ್ಯ - ಪ್ರಶಿಷ್ಯರ ಮೂಲಕ ಮುನ್ನಡೆಯುತ್ತಲೇಯಿದೆ.

ದಾಸರು ಸರ್ವರಿಗೂ ಬೇಕಾದವರು, ಹರಿಭಕ್ತಿಯೇ ಪರಮಗುರಿ. ಹರಿಯ ನಾಮಸ್ಮರಣೆ ದ್ವೈತ - ಸಿದ್ಧಾಂತ - ಬೋಧನೆಗಳ ಜೊತೆಯಲ್ಲೇ ಸಮಾಜದ ನೈತಿಕ ಜೀವನದ ಸುಧಾರಣೆಯನ್ನು ಕೈಕೊಂಡವರು. ರಾಗ ತಾಳ ನರ್ತನಗಳಿಗೆ ಅನುಗುಣವಾಗಿ ದಾಸಸಾಹಿತ್ಯದ ರಚನೆ ಮಾಡಿದವರು.

ಮುಕ್ತಿಗೆ ಭಕ್ತಿಯೇ ಸಾಧನೆ. ಇಂಥ ನಿರಂತರ ಭಕ್ತಿಯ ಅಮೂಲ್ಯ ನಿಧಿಯಲ್ಲಿ ಜನ್ಮ ತಳೆದವರು ಚಂಡರಕಿಯ ರಾಘವೇಂದ್ರದಾಸರು.

ಕಲಬುರ್ಗಿ ಜಿಲ್ಲೆಯಲ್ಲಿಯ ಯಾದಗಿರಿ ತಾಲೂಕಿನ ಒಂದು ಚಿಕ್ಕಗ್ರಾಮ ಚಂಡರಕಿ. ಇಲ್ಲಿಯ ಆಚಾರಶೀಲ ಬಡ ದಂಪತಿಗಳಾದ ಶ್ರೀನಿವಾಸಾಚಾರ್ಯ ಗಂಗಾಬಾಯಿಯವರ ಪುಣ್ಯೋದರದಲ್ಲಿ ಮಂತ್ರಾಲಯ ಶ್ರೀಗಳ ಅನುಗ್ರಹದಿಂದ ರಾಘವೇಂದ್ರರು ಜನಿಸಿದರು. ಶ್ರೀ ಶಕೆ ಪ್ಲವನಾಮ ಸಂವತ್ಸರ ಆಷಾಢ ಬಹುಳ ನವಮಿ ಶುಭ ದಿನದಂದು. ಬಾಲ್ಯದಲ್ಲೇ ತಂದೆ ಒಳ್ಳೆಯ ಸಂಸ್ಕಾರ ನೀಡಿದರು. ದೇವಪೂಜಾ ಪದ್ಧತಿ ವ್ರತಾಚರಣೆ, ಮಂತ್ರ - ಪಠಣ ಜೊತೆಗೆ ಶಾಲಾ ಭ್ಯಾಸ. ಪ್ರಾಪ್ತವಯಸ್ಸಿನಲ್ಲಿ ಉಪನಯನ ಗೈದು ಶಾಸ್ತ್ರಾಭ್ಯಾಸಕ್ಕೆ ಅಣಿಯಾಗಿಸಿತ್ತರು.

ಗುರ್ಮಿಟಕಲ್‌ನ ಪಂಡಿತೋತ್ತಮ ಮಠದ ಶ್ರೀನಿವಾಸಾಚಾರ್ಯರಲ್ಲಿ ವೈದಿಕ ವಿದ್ಯೆಗಾಗಿ ಇಟ್ಟರು. ಗುರುಕುಲ ರೀತಿಯ ವಿದ್ಯಾಭ್ಯಾಸ. ಅಂದಿನ ದಿನಕ್ಕನುಗುಣವಾಗಿ ಹನ್ನೆರಡರ ಬಾಲಕ ರಾಘವೇಂದ್ರನಿಗೆ ಒಂಭತ್ತು ವಯಸ್ಸಿನ ಲಕ್ಷ್ಮೀಬಾಯಿಯೊಂದಿಗೆ ವಿವಾಹ ಬಂಧನ ಏರ್ಪಟ್ಟಿತು.

ರಾಘವೇಂದ್ರನಿಗೆ ವಿದ್ಯೆಯ ಹಂಬಲ, ಹೀಗಾಗಿ ವಿದ್ಯಾರ್ಥಿಯಾಗಿ ಕೋಡಂಗಲ್‌ನ ಶ್ರೀನಿವಾಸಾಚಾರ್ಯರಲ್ಲಿ ಇದ್ದು ಯಾಜ್ಞಿಕ ಕಲಿತನು. ಮುಂದೆ ಮರಳಿದ ಯುವಕ ರಾಘವೇಂದ್ರ ತಂದೆಯಲ್ಲೇ ವಿದ್ಯಾಭ್ಯಾಸ ಮುಂದುವರೆಸಿದನು.

ಇವನ ವಿದ್ಯಾಕಾಂಕ್ಷೆ ಬುದ್ಧಿ ಕೌಶಲ್ಯ ಕಂಡ ಶ್ರೀ ರಘುದಾಂತ ತೀರ್ಥ ಶ್ರೀಗಳು ಇವನನ್ನು ತಮ್ಮಲ್ಲಿ ಪಾಠಕ್ಕಾಗಿ ಬಿಡಲು ಹೇಳಿದರು. ಹೀಗಾಗಿ ಶ್ರೀ ಮಠದಲ್ಲಿ ಮೂರು ವರ್ಷ ಕಾಲ ವ್ಯಾಸಂಗ ಕೈಕೊಂಡರು.

ಮುಂದೆ ಶಾಸ್ತ್ರಾಭ್ಯಾಸಕ್ಕೆಂದು ಪಂಢರಪುರದ ಉದ್ದಾಮ ಪಂಡಿತರಾದ ವರಖೇಡ ಪ್ರದ್ಯುಮ್ನಾಚಾರ್ಯರಲ್ಲಿಗೆ ಹೋದರು.

ಅವರೊಂದಿಗೆ ಪರ್ಯಟನ, ಕಾಶಿ ಮುಗಿಸಿ ಗಯಾದಲ್ಲಿ ವಾಸ್ತವ್ಯ. ದಿನಾಲೂ ಶ್ರೀವಿಷ್ಣುಪಾದ ಪೂಜೆ ಸತ್ಸಂಗ ಪಾಠ ಪ್ರವಚನಗಳಲ್ಲಿ ಕಾಲಕ್ಷೇಪ. ತಂದೆ ತಾಯಿಗಳ ಆಗ್ರಹದ ಕರೆಯ ಮೇರೆಗೆ ಸ್ವಗ್ರಾಮಕ್ಕೆ ಮರಳಿದರು.

ಅಪರೋಕ್ಷ ಜ್ಞಾನಿಗಳಾದ ಮಣೂರಿನ ಶ್ರೀ ಹನುಮದಾಸರು ಚಂಡರಕಿಗೆ ಬಂದು ಹೋಗಿ ಕೆಲವೇ ದಿನಗಳು ಉರುಳಿದ್ದವು. ನಿತ್ಯ ದೇವತಾರ್ಚನೆ, ತಾರತಮ್ಯ ಭಜನೆ, ಪ್ರವಚನ ಇತ್ಯಾದಿಗಳಿಂದ ಭಕ್ತವೃಂದ ಸಂತುಷ್ಟಗೊಂಡಿತ್ತು. ಗ್ರಾಮದಲ್ಲಿ ಧರ್ಮಜಾಗೃತಿ ಗೊಳಿಸಿದ್ದರು. ರಾಘವೇಂದ್ರನ ಸೋದರಮಾವ ಶಾನುಭೋಗ ವೆಂಕಟರಾಯರು ಹನುಮದ್ದಾಸರ ಶಿಷ್ಯರಾಗಿದ್ದರು. ಇವರಿಂದ ಗುರುಗಳ ಮಹಿಮೆ ತಿಳಿದ ರಾಘವೇಂದ್ರನೂ ಅಂಥ ಗುರುವಿನ ದರ್ಶನಕಾಂಕ್ಷೆಯಾಗಿ ಹಲುಬುತ್ತಿದ್ದನು.

ಗುರುವಿಗಾಗಿ ಚಡಪಡಿಸುತ್ತ ಅವರು ವಾಸ್ತವ್ಯದಲ್ಲಿದ್ದ ಮಂತ್ರಾಲಯಕ್ಕೆ ಹೋದರು. ಅಲ್ಲಿಂದ ಪಂಚಮುಖಿ, ಪ್ರಾಣದೇವರ ದರುಶನಕ್ಕೆ ಹೋದರು. ಗುರುಗಳು ಭಜನೆಯಲ್ಲಿ ತಲ್ಲೀನರಾಗಿದ್ದರು. ಅವರನ್ನು ಕಂಡು ಹರ್ಷಗೊಂಡು ಅವರ ವ್ಯಕ್ತಿತ್ವಕ್ಕೆ ಮಾರು ಹೋದರು. ಸೋದರಮಾವ ಅಳಿಯ ರಾಘವೇಂದ್ರನನ್ನು ಗುರುಗಳ ದರ್ಶನಾಶೀರ್ವಾದ ಮಾಡಿಸಿದರು.

ರಾಘಣ್ಣನ ನಯ - ವಿನಯ ಭಯಭಕ್ತಿ ಕಂಡು ತಮ್ಮೊಡನೆ ಬರ ಹೇಳಿದರು. ಕಾಲ ಸರಿದಂತೆ ಪ್ರೀತಿಯ ಶಿಷ್ಯರಾಗಿ ಗುರೂಪದೇಶ ಪಡೆದರು. ಗುರೂಪದೇಶ ಪಡೆದ ದಿನ ರಾಘವೇಂದ್ರನ ಜೀವನದಲ್ಲಿಯ ಒಂದು ಸುದಿನ.

"ವರಗುರು ಉಪದೇಶ ನೆರವಾಯ್ತು ಎನಗೆ ಇನ್ನೇನಿನ್ನೇನು ಹರಿದಾಸರ ಸಂಗ ದೊರಕಿತೆನಗೆ ಇನ್ನೇನಿನ್ನೇನು" ಜನ್ಮಸಾರ್ಥಕವಾಯ್ತೆಂದು ಆನಂದದಿಂದ ಕುಣಿದಾಡಿದರು.

ಶಿಷ್ಯನಿಗೆ ಧರ್ಮರಹಸ್ಯ ತತ್ವರಹಸ್ಯ ಅನುಸಂಧಾನಗಳ ಸೂಕ್ಷ್ಮತೆಗಳನ್ನು ಉಪದೇಶಿಸುತ್ತಿದ್ದರು.

ಸ್ವತಃ ಅಪರೋಕ್ಷ ಜ್ಞಾನಿಗಳೂ ತೇಜಃಪುಂಜರಾದ ಹನುಮದಾಸರು ಶಿಷ್ಯನಿಗೂ ಇವುಗಳನ್ನೇ ಕರುಣಿಸಿದರು. ಶಿಷ್ಯ ಪರಿವಾರಸಮೇತರಾಗಿ ಪ್ರತಿ ವರ್ಷ ತಿರುಪತಿಗೆ, ಹಾಗೇ ದಕ್ಷಿಣದ ಎಲ್ಲಾ ತೀರ್ಥ ಕ್ಷೇತ್ರಗಳನ್ನೂ ಸಂದರ್ಶಿಸುತ್ತಿದ್ದರು. ರಾಘಣ್ಣ ಗುರುವಿನಾಶ್ರಮದಲ್ಲಿ ನಿಷ್ಠೆ ವಿಶ್ವಾಸಗಳಿಂದ ಇಪ್ಪತ್ನಾಲ್ಕು ವರ್ಷ ಗುರುಸೇವೆ ಗೈದು ಶಿಷ್ಯೋತ್ತಮರಾಗಿ ಗುರುವಿನನುಗ್ರಹ ಸಂಪಾದಿಸಿದವರು.

ಮುಂದಿನ ದಿನಗಳಲ್ಲಿ ಅನೇಕ ತೀರ್ಥಕ್ಷೇತ್ರ ಸಂದರ್ಶಿಸಿ ಅನುಷ್ಠಾನಗೈದರು. ಹರಿದಾಸರಾಗಿ ಊರೂರು ಅಲೆದರು.

ಅಥಣಿ ಭೀಮದಾಸರೆಂದು ಹೆಸರು ಪಡೆದಿದ್ದ ಹೂಗಾರ ಭೀಮದಾಸರು ಮಣೂರು ದಾಸರಿಂ

ಚಂಡರಕಿ ದಾಸರೆಂದೇ ಪ್ರಸಿದ್ಧರಾದ ರಾಘವೇಂದ್ರದಾಸರು ಅರ್ವಾಚೀನಕಾಲದ ಹರಿದಾಸರಲ್ಲಿ ಪ್ರಮುಖರು. ಅವರ ಶಿಷ್ಯಪ್ರೇಮ, ಸಮಾಜ ಸಂಗ್ರಹ ದೃಷ್ಟಿ, ಮಿಗಿಲಾಗಿ ಮಾಧವಭಕ್ತಿ, ಆನಂದತೀರ್ಥ ತತ್ವದ ಅನುರಕ್ತಿ ಅಮೋಘವಾದದ್ದು. ಅದನ್ನು ವಿವರಿಸಿದ್ದಾರೆ ಲೇಖಕರು.

ದಲೇ ಉಪದೇಶ ಪಡೆದಿದ್ದರು. ಅವರೂ ಗುರು ಬಂಧು ಚಂಡರಕಿದಾಸರೊಡನೆ ಅನ್ಯೋನ್ಯರಾಗಿ ಅನುಗ್ರಹ ಪಡೆದರು.

ಚಂಡರಕಿದಾಸರ ವಿಶೇಷ ಅನುಗ್ರಹಕ್ಕೆ ಪಾತ್ರ ರಾದವರು ಅಯಾಚಿತ ವೆಂಕಣ್ಣಾಚಾರ್ಯರು. ಸದ್ಗುರುವಿಗಾಗಿ ಮಂತ್ರಾಲಯದಲ್ಲಿದ್ದಾಗ ಭೀಮ ದಾಸರಿಂದ ಚಂಡರಕಿ ದಾಸರ ಭೆಟ್ಟಿಯಾಯ್ತು. ಮುನ್ನಾದಿನದಂದು ಸ್ವಪ್ನದಲ್ಲಿ ಕಂಡ ತೇಜಃಪುಂಜ ಆಚಾರ್ಯರೇ ಇವರೆಂದು, ಮಂತ್ರೋಪದೇಶಕ್ಕಾಗಿ ಪ್ರಾರ್ಥಿಸಿದರು.

ರಾಯರ ಪವಿತ್ರ ಸನ್ನಿಧಿಯಲ್ಲಿ ಪ್ರಥಮ ಶಿಷ್ಯನಿಗೆ ಮಂತ್ರೋಪದೇಶ ಅನುಗ್ರಹಿಸಿದರು. ಗುರುವಿನ ಸೇವೆ ಗೈಯುತ್ತ ಹರಿಯ ಅನುಗ್ರಹಕ್ಕಾಗಿ ಚಿಪ್ಪಗಿರಿ ಹಂಪಿ ಹೀಗೆ ಅಲೆದಾಡತೊಡಗಿದರು.

ಖ್ಯಾತಿ ಬೆಳೆಯತೊಡಗಿತು. ಹೈದ್ರಾಬಾದ ಕರ್ನಾಟಕ, ಅಲ್ಲದೆ ವಿಜಾಪುರ ಧಾರವಾಡ ಬಳ್ಳಾರಿ ಬೆಳಗಾಂವಿ ಹೀಗೆ ಎಲ್ಲೆಡೆಯಿಂದ ಶಿಷ್ಯರ ಸಂಖ್ಯೆಯೂ ಬೆಳೆಯಿತು. ಇವರ ಅಂತಃಕರಣ ಶಿಷ್ಯವಾತ್ಸಲ್ಯ ಶಾಂತಿಗೌರವಗಳು ಆದರಣೀಯ.

ಭೂತೋಚ್ಚಾಟನೆ ಅಪಮೃತ್ಯು ಪರಿಹಾರ, ಆಪತ್ತು ಪರಿಹಾರ, ಮಾನಸ ಪೂಜಾರಾಧನೆ ಮುಂತಾದವು ಕುರಿತಾಗಿ ಉಪದೇಶ ಗೈಯ್ಯುತ್ತಿದ್ದರು. ತೇನ ವಿನಾ ತೃಣಮಪಿ ನ ಚಲತಿ, ಸಾಲಿಗನಾಗ ಬೇಡ, ಸಾಲದ್ದೆನಬೇಡ, ಹರಿಸ್ಮರಣೆ ಮಾಡು ಎನ್ನುತ್ತಿದ್ದರು.

ಪ್ರವಚನ ಆರಾಧನೆಗಾಗಿ ಎಲ್ಲೆಡೆ ಹೋಗುತ್ತಿದ್ದರು. ಅಥಣಿಗೆ ಭೀಮದಾಸರ ಬಿನ್ನಹದಂತೆ ಹೋಗುತ್ತಿದ್ದರು. ಅಯಾಚಿತ ವೆಂಕಣ್ಣಾಚಾರ್ಯ, ಭೀಮದಾಸರ ಜೊತೆ ಅನ್ಯೋನ್ಯನಾಗಿದ್ದ. ಮುಧೋಳದ ಸಾಧಕ ತಾಸಗಾಂವಕರ ಗುಂಡಪ್ಪ ಆಧ್ಯಾತ್ಮಜೀವಿ. ಮುಧೋಳದಲ್ಲಿ ಹರಿಭಜನೆ, ಆರಾಧನೆ ಪ್ರಸಾದ ಗುರುಸೇವೆಗಳಿಂದ ಸಮಾಜಸೇವೆ ಹರಿಸೇವೆ ಗೈಯ್ಯುತ್ತಿದ್ದವರು. ಇವರ ಮನೆಗೂ ಆಗಾಗ ಚಂಡರಕಿ ದಾಸರು ಬರುತ್ತಿದ್ದರು.

ಮುಧೋಳದಲ್ಲಿ ರಾಯರ ಮಠಸ್ಥಾಪನೆಯ ಸಮಯದಲ್ಲಿ ಅದ್ದೂರಿಯ ಮೆರವಣಿಗೆ. ಈ ನಾಲ್ವರೂ ಹರಿದಾಸರಾಗಿ ತಾಳ ತಂಬೂರಿ ಗೋಪಾಳಬುಟ್ಟಿ ಹರಿನಾಮಸ್ಮರಣೆಯೊಂದಿಗೆ ನಗರ ಪ್ರದಕ್ಷಿಣೆ.

ಚಾತುರ್ವರ್ಣದವರಿಗೂ ದಾಸರು ಪ್ರಿಯರಾಗಿದ್ದರು. ಸರ್ವರಿಗೂ ಲೇಸನ್ನೇ ಬಯಸುವ ಶಾಂತಮೂರ್ತಿಗಳಾಗಿದ್ದರು. ತೀರ ಸಾಮಾನ್ಯರಂತೆ ಬದುಕು ಸಾಗಿಸಿದ ಇವರು ರಾಮೇಶ್ವರದಿಂದ ಬದರಿಯ ವರೆಗೂ ತೀರ್ಥಯಾತ್ರೆ ಕೈಕೊಂಡಿದ್ದರು. ಇವರ ಭಜನೆ ಪೂಜೆಗಳೆಂದರೆ ಪ್ರತ್ಯಕ್ಷ ದೈವಸಾನ್ನಿಧ್ಯವಿರುತ್ತಿತ್ತು.

ಆರಾಧನೆಗೆ ದೇವತೆಗಳೆಲ್ಲಾ ಬನ್ನಿ ಎಂದು ಶಿಷ್ಯರನ್ನು ಎಚ್ಚರಿಸುತ್ತಿದ್ದರು.

ಅಂಜಿಕಿ ನ್ಯಾತಕಯ್ಯಾ ಸಜ್ಜನರಿಗೆ ಭಯವು ಇನ್ಯಾತಕಯ್ಯಾ

ನಮ್ಮ ಮಧ್ಯೆಯೇ ಬದುಕಿ, ವೈರಾಗ್ಯದ ಜೀವನ ಬಾಳಿ ಮೋಕ್ಷಸಾಧನೆಗೈದಂಥ ವೈಷ್ಣವೋತ್ತಮ ಹರಿವಾಸರು ಭಗವಧ್ಯಾನದಲ್ಲಿದ್ದಾಗಲೇ ದುಂಧುಭಿನಾಮ ಸಂವತ್ಸರದ ಅಧಿಕ ಆಶ್ವಿಜ ಬಹುಳ ಸಪ್ತಮಿ ಚಂಡರಕಿಯಲ್ಲೇ ವೈಕುಂಠವಾಶಿಗಳಾದರು.

ಮಧ್ವಮತ ಪ್ರಸಾರವಿಷ್ಠೆ ಧರ್ಮಜಾಗೃತಿ ಸಮರ್ಪಣಾಭಾವ, ದೇವರ ಅನುಷ್ಠಾನ, ಶಾಪಾನುಗ್ರಹ ಶಕ್ತಿಯುಳ್ಳ ದಾಸರು ಇನ್ನೂ ಒಂದಂಶರೂಪ ಇರುವರೆಂದು ಶಿಷ್ಯಗಣ ಗ್ರಹಿಸಿದ್ದಾರೆ. ಅಕ್ಟೋಬರ್ ಹದಿನಾಲ್ಕರಿಂದ, ಹದಿನಾರರ ವರೆಗೆ ಚಂಡರಕಿಯಲ್ಲಿ ಬಾದರಾಯಣರಾಯರು ತಂದೆ ರಾಘವೇಂದ್ರದಾಸರ ಆರಾಧನೆಯನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ.




# ಸುಲಭ ದರದಲ್ಲಿ ಸ್ವಾಮಿ ದರ್ಶನ
# ನಿಮ್ಮ ಮನೆಯಂಗಳದಿ ನಿಗಮಗೋಚರ

ತಿರುಮಲೆಯಲ್ಲಿ ನೆಲೆನಿಂತ ಶ್ರೀವೆಂಕಟೇಶ್ವರ ಸ್ವಾಮಿಯ ಬ್ರಹ್ಮೋತ್ಸವವನ್ನು ನೀವು ಮನೆಯಲ್ಲಿ ಕುಳಿತು ಈಗ ಮತ್ತೆ ಮತ್ತೆ ನೋಡಬಹುದು. ಬ್ರಹ್ಮೋತ್ಸವದ ವಿವಿಧ ವಾಹನಗಳಲ್ಲಿ ಬೀದಿ ಮೆರವಣಿಗೆ ಹೊರಡುವ ಸ್ವಾಮಿಯನ್ನು ಕಣ್ತುಂಬಿ ಮನತುಂಬಿಕೊಳ್ಳಲು ಮನೆಗೆ ಬರಮಾಡಿ ಕೊಳ್ಳಬಹುದು.

ತಿರುಮಲೆಯ ಸುತ್ತಮುತ್ತಣ ಭಕ್ತಿಭರಿತ ಕ್ಷೇತ್ರದ ಹರವನ್ನು ಮನೆಯ ಒಳಗೂ ಪಡೆಯಬಹುದು. ಸ್ವಾಮಿಯನ್ನು ಕಾಣುವ ಅವಸರದಲ್ಲಿ ಬಿಟ್ಟಿದ್ದ ಇತರ ಸ್ಥಳಗಳನ್ನು ನಿಧಾನವಾಗಿ ನೋಡಿ ಪರಿಚಯ ಪಡೆಯಬಹುದು.

*ಶ್ರೀ ವೆಂಕಟೇಶ್ವರ ಬ್ರಹ್ಮೋತ್ಸವಂ* — *ಬೆಲೆ --- ರೂ. 160/-*

*ಶ್ರೀ ವೆಂಕಟೇಶ್ವರ ವೈಭವಂ* — *ಬೆಲೆ --- ರೂ. 165/-*

ಎರಡೂ ವಿಡಿಯೋ ಕ್ಯಾಸೆಟ್‌ಗಳು ಎಲ್ಲ ತಿ. ತಿ. ದೇ. ವಿಚಾರಣಾಕೇಂದ್ರಗಳಲ್ಲೂ ದೊರೆಯುತ್ತವೆ. ನೇರವಾಗಿ ತಿರುಪತಿಯಲ್ಲಿಯೂ ಖರೀದಿಸಬಹುದು.

ಅಂಚವೆಚ್ಚ ಪ್ರತ್ಯೇಕ,

ಕೂಡಲೇ ಬರೆಯಿರಿ --- ಸಂಪಾದಕರು--ಪುಸ್ತಕಮಾರಾಟ ವಿಭಾಗ--ತಿ.ತಿ.ದೇ. ತಿರುಪತಿ.

# ಕೇಶವಭಕ್ತಿಸಾರ

(ಭಾಮಿನಿ ಷಟ್ಪದಿಗಳು)

---ಕೆ. ರಾಮಾಚಾರ್ಯ.

ಅಜ್ಞನಲ್ಲವೆ ನಾನು, ನಿನ್ನ ಸು
ಪ್ರಜ್ಞೆಯನು ಪಡೆಯದಲೆ ಪೂರ್ಣ
ಪ್ರಜ್ಞ ವಿರಚಿತ ಗ್ರಂಥ ನೋದದವಜ್ಞೆಗೈದೆನಲ
ಯಜ್ಞನಾಮಕ ಹರಿಯೆ, ನೀ ಸ
ರ್ವಜ್ಞನೆಂಬುವ ಜ್ಞಾನವನೆ ಕೊಡು
ಪ್ರಾಜ್ಞರೊಂದಿತ ಪಾದ ಕೇಶವ ಪೋಷಿಸನವರತ ||೧||

ಭಾಗಿರಥಿ ಪಿತ ನಿತ್ಯ ಬಾಗುವೆ
ರಾಗದಿಂದಲಿ, ನಿನ್ನ ಸೇವಿಪ
ಭಾಗವತರೊಡನಾಡುವಂಥ ಸುಯೋಗವನ್ನಿತ್ತು
ದೇಗನುಗ್ರಹ ಮಾಡು ಈ ಭವ
ರೋಗವುಲ್ಬಣ ವಾಗ ದಿರ್ಪುದೆ?
ನಾಗಭೂಷಣಗೊಲಿದ ಕೇಶವ ಪೋಷಿಸನವರತ ||೨||

ಖೇಟಗಮನ, ವಿರಾಟಪುರುಷ ಕಿ
ರೀಟಿ ಗೊಲಿದಿಹ ಕೈಟಭಾರಿ ಭ
ವಾಟವಿಯ ದಾಟಿಸದು ನಿನಗೊಂದಾಟ ವಲ್ಲೇನು?
ಹಾಟ ಕಾಂಬರ ಧರನೆ, ಕರುಣೆಯ
ನೋಟ ವೆನ್ನಲಿ ಬೀರು, ಜಗ ಸಾ
ಮ್ರಾಟ ನಲ್ಲವೆ ನೀನು ಕೇಶವ ಪೋಷಿಸನವರತ ||೩||

ಕಪ್ಪು ವರ್ಣನೆ, ಕಪ್ಪು ಗೊರಳನ
ಅಪ್ಪನಿಗರೇ ದೊಪ್ಪನಲ್ಲವೆ ?
ಸುಪ್ಪರಣವಾಹನನೆ, ಆಸ್ರಾಕೃತಿನಿಗೊಂದಿಸುವೆ
ಅಪ್ರಮೇಯ ಪ್ರತಿಮ ಕ್ಷಿಪ್ರದಿ
ಅಪ್ರಯೋಜಕ ಗೊಲಿಮು ಚಿತ್ತದಿ
ಸುಪ್ರಸನ್ನತೆ ನೀಡಿ ಕೇಶವ ಪೋಷಿಸನವರತ ||೪||

ಹರಿಯೆ, ನಿನ್ನೊರತೆನ್ನ ರಕ್ಷಿಪ
ಕರುಣವತ್ಸಲರನ್ನು ಕಾಣೆನು
ಹರ ವಿರಿಂಚಾದ್ಯಮರ ರೆಲ್ಲರು ನಿನ್ನ ಕಿಂಕರರು
ಸರುವ ಸುರರುಗಳೆಲ್ಲ ನಿನ್ನನೆ
ನಿರುತವಲಿ ಸೇವಿಸುತಲಿರ್ಪರು
ಸರುವ ರಂತರ್ಯಾಮಿ ಕೇಶವ ಪೋಷಿಸನವರತ ||೫||

ದೇವ ದೇವನೆ, ನಿನ್ನನಾವಗು
ಸೇವಿಸದೆನಾ, ಗಾವಿಲೆನಿಸಿದೆ
ಪಾವಿನೋಳ್ಪವಡಿಸಿದ ದೇವರ ದೇವ ನೀನೆಂದು
ಭಾವಿಸುತ ನಾನಿನ್ನ ಬಲುಸ
ದ್ಭಾವ ಭಕ್ತಿಲಿ ಮಣಿವೆ, ನಿನ್ನಯ
ಪಾವನಾಂಘ್ರಿದ್ವಯಕೆ, ಕೇಶವ ಪೋಷಿಸನವರತ ||೬||

ವೇದಗಮ್ಯನೆ ನಿನ್ನ ನರಿಯದ
ವೇದನೆಯ ನಾನೆಂತು ಸಹಿಸಲಿ
ಆದುದಾಯಿತು, ಹಿಂದೆ ಗೈದಪರಾಧ ಮನ್ನಿಪುದು
ಮೇದಿನೀ ಪತಿಯೆನಗೆ ನಿನ್ನಯ
ಪಾದಗಳೆಗತಿಯೆಂದು ನಂಬಿಹೆ
ನಾದಿನಾರಾಯಣನೆ ಕೇಶವ ಪೋಷಿಸನವರತ ||೭||

ಸ್ವಾಮಿ ನಿನ್ನಯ ನಾಮ ನಿತ್ಯವು
ಪ್ರೇಮದಿಂದಲಿ ಭಜಿಪೆ, ಮನದಲಿ
ವ್ಯೋಮ ಕೇಶನಿಗೊಲಿದ ದಾಮೋದರ ಪರಂಧಾಮ
ಕಾಮಿತಪ್ರದ, ನಿನ್ನ ಕರುಣೆಯ
ತಾ ಮುನೀಶ್ವರ ವಾಲ್ಮಿಕೆಣಿಸುತ
ರಾಮಯಣ ರಚಿಸಿದನು ಕೇಶವ ಪೋಷಿಸನವರತ ||೮||

ಮುದ್ದು ಮೊಗದ ಮುಕುಂದ ಬೆಣ್ಣೆಯ
ಕದ್ದ ಬಾಲನೆ, ನಿನ್ನನೇ ಪರಿ
ಶುದ್ಧ ಭಕ್ತಿಲಿ ಭಜಿಪೆ, ಪ್ರಾತಃಕಾಲವಲ್ಲೆದ್ದು
ಹೊದ್ದ ತುರಿತದಿ ತಿದ್ದು ಚರಣಕೆ
ಬಿದ್ದು ಹೊರಳಾಡುವೆ ದರಿದ್ರನ
ಉದ್ಧರಿಸೊ ಕರುಣಾಬ್ಧಿ ಕೇಶವ ಪೋಷಿಸನವರತ ||೯||

ಬಡವನಲ್ಲವೆ ನಾನು ನೀ ಜಗ
ದೊಡೆಯ, ಭಕ್ತರ ಕರೆಗೆ ಕರಗುವ
ಕಡು ದಯಾ ಮಡುವೆಂದು ಕಾಲ್ಪಿಡಿಯುವೆನು ಭಕ್ತಿಯಲಿ
ದೃಢ ಮನದ ಧ್ರುವ ರಾಜ ಮೆಚ್ಚಿಸಿ
ಪಡೆದನಲ್ಲವೆ ನಿನ್ನ ದರುಶನ
ಬಡಕುಚೇಲನಿಗೊಲಿದ ಕೇಶವ ಪೋಷಿಸನವರತ ||೧೦||

ಎಲ್ಲರಲಿ ತುಂಬಿರುವೆ ನಿನ್ನೊಳ
ಗೆಲ್ಲವಡಗಿವೆ ಕಲ್ಲು ಮುಳ್ಳುಗ
ಳಳ್ಳಿನಲ್ಲಿಹೆ, ಅಲ್ಲಿಯಿಲ್ಲೆಲ್ಲೆಲ್ಲು ಅವಿತಿರುವೆ
ಸುಳ್ಳ ಸೊಲ್ಲಿವಿದಲ್ಲ ದೇವಗ
ಳೆಲ್ಲುಸುರ್ವವು ಒಳ್ಳೆ ಪುರುಷಲಿ
ಬಲ್ಲರಿದ ಕೊಪ್ಪಿಪರು ಕೇಶವ ಪೋಷಿಸನವರತ ||೧೧||

ವಿಪ್ರಜನ್ಮವೆ ಹೆಚ್ಚೆನಮು ಅತಿ
ಕ್ಷಿಪ್ರದಲಿ ಪ್ರತ್ಯಕ್ಷನಾಗುತ
ತಪ್ಪದೆನಗಪರೋಕ್ಷ ಜ್ಞಾನವ ನೀಯ ದೇಕೆಂದು
ಸುಪ್ರಭಾತದಲೆದ್ದು ಪ್ರಾರ್ಥಿಪೆ
ನಪ್ರಮೇಯನೆ ಒಲಿಯೊ ಶೀಘ್ರದಿ
ಸುಪ್ಪರಣ ವಾಹನನೆ, ಕೇಶವ ಪೋಷಿಸನವರತ || ೧೨ ||

ಹೇ ದಯಾಘನ ಮೋಕ್ಷಪ್ರಾಪ್ತಿಗೆ
ಸಾಧನಲ್ಲವೆ ನಿನ್ನ ಚರಣಾ
ರಾಧನೆಯ ನಾದರದಿ ಗೈಯ್ಯುತ ಸಾಧು ಸಜ್ಜನರ
ಮೋದದಿಂದಲಿ ಸೇವಿಸುವೆ ಪ್ರ
ಹ್ಲಾದ ಆ ಧ್ರುವ ರಾಜರೇ ಮೇ
ಲಾದ ಪದಪಡೆದಿಹರು ಕೇಶವ ಪೋಷಿಸನವರತ || ೧೩ ||

ಅರ್ಣ ಸಂಪ್ರತಿ ಸಾಧ್ಯ ನಿನ್ನನು
ಪೂರ್ಣ ತಿಳಿಯ ಲಶಕ್ಯ ದೇಹವು
ಜೀರ್ಣ ವಾಗದ ಮುನ್ನ ಕಂಗಳ ಮುಂದೆ ಸುಳಿವಾಡೊ
ಪೂರ್ಣಪ್ರಜ್ಞರಿಗೊಲಿದ ಹರಿ ಶ
ರ್ವಾಣಿ ಪತಿ ಸಹ ನಿನ್ನ ಮಹಿಮೆಯ
ವರ್ಣಿಸಲು ಅಸಮರ್ಥ ಕೇಶವ ಪೋಷಿಸನವರತ || ೧೪ ||

ಆಪ್ತ ಭಗವದ್ಭಕ್ತರಿಗೆ ಜಗ
ದ್ವ್ಯಾಪ್ತ ನೀ ಮುಕ್ತರಿಗೆ, ಕ್ಷಿಪ್ರದಿ
ಪ್ರಾಪ್ತವಾಗುವ ಸಪ್ತಗಿರಿ ತಿಮ್ಮಪ್ಪ ನೀನೆಂದು
ಗುಪ್ತ ಭಕ್ತಿಲಿ ಭಜಿಸುತಿರ್ಪೆನು
ಸಪ್ತ ತರುಗಳ ತರಿದ ದೇವ ದ್ವಿ
ಸಪ್ತಲೋಕಾಧಿಪತಿ ಕೇಶವ ಪೋಷಿಸನವರತ || ೧೫ ||

ನಿತ್ಯ ನಿರ್ಮಲ ನಿಗಮವೇದ್ಯನೆ
ಸತ್ಯ ಸಂಕಲ್ಪನೆನಿಸಿ ಲೋಕದ
ಭೃತ್ಯ ಜನರುದ್ಧಾರ ಕರ್ತೆಂದೆನಿಸಿ ಪೃಥ್ವಿಯಲಿ
ಹತ್ತು ಅವತಾರಗಳನೆತ್ತಿದ
ಭೃತ್ಯವತ್ಸಲ ಭಯನಿವಾರಣ
ಕೃತ್ತಿವಾಸನಿಗೊಲಿದ ಕೇಶವ ಪೋಷಿಸನವರತ || ೧೬ ||

ಭಾರತೀಶ ಪ್ರಿಯನೆ ನಿನ್ನನು
ಬಾರಿಬಾರಿಗೆ ನೆನೆವೆ ಮನದಲಿ
ತೋರು ನಿನ್ನ ಪದಾರ ವಿಂದದ್ವಯವ ಕರುಣೆಯಲಿ
ನಾರಿ ಧಾರುಣಿ ಸಿರಿಗಳಲಿ ಎನ
ಗಾರು ಹಿತದವರಿಲ್ಲ ಮುಕ್ತಿಯ
ಧಾರೆಯೆರೆಯುವ ಧೀರ ಕೇಶವ ಪೋಷಿಸನವರತ || ೧೭ ||

ಫಲದ ಪೇಕ್ಷೆಯ ನಿಡದೆ ನಿನ್ನನೆ
ಹಲವು ಕಾಲದಿ ಸೇವಿಸುತ್ತಿಹೆ
ಹಲಧರಾನುಜ ಪ್ರಳಯ ಕಾಲದಿ ಆಲದೆಲೆ ಮೇಲೆ
ಮಲಗಿ ಕೊಂಡೆಡಗಾಲಿ ನಂಗುಲಿ
ಮೆಲುವ ಮಂಗಲ ದೃಶ್ಯ ತೋರಿಸೊ
ಬಲಿಯ ಬಾಗಿಲ ಕಾಯ್ದ ಕೇಶವ ಪೋಷಿಸನವರತ || ೧೮ ||

ಜಗಕೆ ನೀ ಪರದೈವನಲ್ಲವೆ
ಬಗೆ ಬಗೆಯ ಭಕ್ತಿಯಲಿ ಪೊಗಳುವೆ
ಹಗಲು ರಾತ್ರಿಗಳೆನದೆ, ಅಗಣಿತ ಸುಗುಣ ನಿಧಿಯೆಂದು
ನಿಗಮ ವೇದ್ಯನಗೊಲಿಯೊ ನಾನಿ
ನ್ನಗಲಿ ಜೀವಿಸಲಾರೆ, ಕೈಗಳ
ಮುಗಿವೆ ನಾಲ್ಮೊಗ್ಗನಯ್ಯ ಕೇಶವ ಪೋಷಿಸನವರತ || ೧೯ ||

ನರನ ಜನ್ಮವೆ ಹಿರಿದು ಅದರಲಿ
ಪರಮ ವೈಷ್ಣವ ಮತವೆ ಪರತರ
ಹೊರಳಿ ಈ ನರಬರುವುದೊ ಬಾರದಿರುತಿಪುದೊ ?
ಮರಣ ಸಮಯಕೆ ನಿನ್ನ ನಾಮ
ಸ್ಮರಣೆ ಕರುಣಿಸು ಸ್ಮರನ ಪಿತನರ
ಹರಿಯೆ ನಿನಗೆರಗುವೆನು ಕೇಶವ ಪೋಷಿಸನವರತ || ೨೦ ||

ಅಚ್ಚ ಭಕ್ತರಿಗೊಲಿವ ಗುಣವದು
ಹೆಚ್ಚು ಗಾರಿಕೆಯೆನಿಸದಚ್ಚುತ
ಹುಚ್ಚ ಭಕ್ತನಿ ಗೊಲಿವ ಗುಣವದೆ ಮೆಚ್ಚುವಂತಹುದು
ನಿಚ್ಚ ನಿನ್ನಯ ಸ್ವಚ್ಛ ಭಕ್ತಿಯ
ಲರ್ಚಿಸುತ್ತಿಹೆ ಭೃತ್ಯವತ್ಸಲ
ಸಚ್ಚರಿತ್ರೆನಗೊಲಿದು ಕೇಶವ ಪೋಷಿಸನವರತ || ೨೧ ||

ಫಣಿಯ ಫಣದಲಿ ಕುಣಿದೆ ಕುಣಿದರು
ದಣಿಯದಿಹ ಧಣಿ, ಸುಗುಣ ನಿಧಿ ಫ
ಲ್ಗುಣನ ಸಾರಥಿ, ತ್ರಿಣಯ ಪೂಜಿತ ಚರಣ ಭವಹರಣ
ಪ್ರಣವ ಪ್ರತಿಪಾದ್ಯನ್ನ ಅವಗುಣ
ವೆಣಿಸದೀಕ್ಷಣಕೊಲಿ ವಿಭೀಷಣ
ವಿನುತ ವಿನಯದಿ ಮಣಿವೆ ಕೇಶವ ಪೋಷಿಸನವರತ || ೨೨ ||

ಪತಿತಪಾವನ ಹೇ ಜಗತ್ಪತಿ
ಗತಿ ಪ್ರದಾಯಕ ನಿನ್ನನಾ ಸಂ
ಸ್ತುತಿಸೆ ಪ್ರತಿನಿತ್ಯದಲಿ ನಿನ್ನತಿಶಯದ ಭಕ್ತಿಯಲಿ
ಅತನುಪಿತ ನಿನ್ಹೊರತು ನಾನಿ
ನ್ನಿತರ ದೇವರ ಕುರಿತು ಭಜಿಸೆನು
ಕ್ಷಿತಿ ಕುಮಾರನ ಪತಕೆ ಕೇಶವ ಪೋಷಿಸನವರತ || ೨೩ ||

ಬಿಂಬನೇ ನೀನೆನಗೆ, ನಾ ಪ್ರತಿ
ಬಿಂಬ ನಲ್ಲವೆ ನಿನಗೆ ವಿಶ್ವ ಕು
ಟುಂಬಿ ನೆರೆನಂಬಿಹೆನು ನಿನ್ನ ಪದಾಂಬುಜದ್ವಯವ
ಕುಂಭಿಣೀ ಪತಿಯೆಂದು ಪ್ರತಿದಿನ
ತುಂಬಿಡುವೆ ಸಂಭ್ರಮದಿ ನಾರದ
ತುಂಬುರಾದ್ಯರಿಗೊಲಿದ ಕೇಶವ ಪೋಷಿಸನವರತ || ೨೪ ||

ಶೇಷಶಯನ ಸಹಸ್ರ ಶೀರ್ಷ ಮ
ಹೇಶವಾಸವರಾದಿ ನಿನ್ನ ವಿ
ಶೇಷ ಭಕ್ತಾಗ್ರೇಸರೆನ್ನಿಸೆ ನಿನ್ನುಪಾಸನೆಯು
ದೇಸರಿಲ್ಲವೆ ಗೈಯ್ವರೂ ಲವ

ಲೇಶ ನಿನ್ನಯ ಮಹಿಮೆಯರಿಯರು
ಭಾಸುರಾಂಗೆನಗೊಲಿದು ಕೇಶವ ಪೋಷಿಸನವರತ || ೨೫ ||

ಸ್ವಾಮಿ ನಿನ್ನಯ ನಾಮಗಳ ಪ್ರತಿ
ಯಾಮಯಾಮಕೆ ಮನದಿ ಸ್ಮರಿಸುವೆ
ಕಾಮಿತ ಪ್ರದನೆಂದು ವೇದಸ್ತೋಮಗಳು ನಿನ್ನ
ಮೈಮರೆದು ಸಂಸ್ತುತಿಸುತಿವೆ ತಿರು
ನಾಮಧರಿಸಿದ ಶಾಮಸುಂದರ
ಸಾಮ ರಾಜನಿಗೊಲಿದ ಕೇಶವ ಪೋಷಿಸನವರತ || ೨೬ ||

ನನ್ನ ದೇನೊಂದಿಲ್ಲವೋ ನಾ
ನಿನ್ನವನೆ, ನಾನನ್ಯನಲ್ಲವೊ
ನನ್ನಿ ಯಿಂದಲಿ ನಿನ್ನನೇ ಚೆನ್ನಾಗಿ ಸೇವಿಸುವೆ
ನಿನ್ನನುಗ್ರಹವೊಂದೆ ಸಾಕೆನ
ಗನ್ಯಥಾ ಗತಿಯಿಲ್ಲ ನಿನ್ನಯ
ದೆನ್ನಿಗಂಟಿದ ಭೃತ್ಯ ಕೇಶವ ಪೋಷಿಸನವರತ || ೨೭ ||

ವೇಣುನಾದವಿನೋದ ಮುಖ್ಯ
ಪ್ರಾಣನಾಥನಿಗೊಲಿದು ಮುಂದಣ
ವಾಣಿಪತಿ ಪೀಠಾಧಿಪತ್ಯವ ನಿತ್ತ ನಿಶ್ಚಯದಿ
ಬಾಣ ಬಾಹುಚ್ಛೇದ ಜಗನಿ
ರ್ಮಾಣ ಮಾಣವಲೊಲಿದು ಕಣ್ಣಿಗೆ
ಕಾಣಿಸೆಂದೆರಗುವೆನು ಕೇಶವ ಪೋಷಿಸನವರತ || ೨೮ ||

ಸರ್ವ ದೇವತೆಗಳಲಿ ನೀನೇ
ಸರ್ವ ಸರ್ವೋತ್ತಮನು ಎಂಬುದು
ನಿರ್ವಿವಾದವು ಸಕಲ ವೇದಾದಿಗಳ ಸಮ್ಮತವು
ನಿರ್ವಿಕಾರದ ಮನದಿ ನಿನ್ನನೇ
ಸರ್ವದಾ ಸೇವಿಸುತ ಜೀವಿಸೆ
ಶರ್ವವಂದ್ಯನೆಗೊಲಿದು ಕೇಶವ ಪೋಷಿಸನವರತ || ೨೯ ||

ಮಂಗಲಂ ಮಣಿಪುರ ನಿವಾಸಿಗೆ
ಮಂಗಲಂ ನಿಜ ಭೃತ್ಯ ಪೋಷಗೆ
ಮಂಗಲಂ ಭೀಮಾತರಂಗಿಣಿ ತಟದಿ ತಂಗಿಹಗೆ
ಮಂಗಲಂ ಮಾತಂಗ ವರದಗೆ
ಮಂಗಲಂ ಗದ ಪ್ರೀಯ ಗರುಡ ತು
ರಂಗ, ಗಂಗಾಪಿತ ಶುಭಾಂಗಗೆ ನಿತ್ಯಮಂಗಲವು || ೩೦ ||



# ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿವೆ. ಈ ಬಸ್‌ನಲ್ಲಿ ಹೊರಟು;

*ಶ್ರೀ ಗೋವಿಂದರಾಜಸ್ವಾಮಿ ದೇವಾಲಯ*
*ಶ್ರೀ ಕೋದಂಡರಾಮಸ್ವಾಮಿ ದೇವಾಲಯ*
*ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು*
*ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ*
*ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ*

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು. (೨ ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ ೬--೦೦, ಬೆಳಗ್ಗೆ ೧೦--೦೦, ಸಂಜೆ ೩--೦೦

ಬಸ್ ಪ್ರಯಾಣದ ದರ : ಒಂದು ಟಿಕೆಟ್ಟಿಗೆ ೨೦ ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇ.**

# ತಿಂಗಳಿನ ಮುಖ್ಯದಿನಗಳು

ಜನ.. --- 1996

1 ಸೋಮವಾರ :
ವೈಕುಂಠ ಏಕಾದಶಿ.

2 ಮಂಗಳವಾರ :
ಶ್ರೀ ಕಪಿಲೇಶ್ವರಸ್ವಾಮಿ
ತೆಪ್ಪೋತ್ಸವಾರಂಭ.

4 ಗುರುವಾರ :
ಶ್ರೀ ಕಪಿಲೇಶ್ವರಸ್ವಾಮಿ
ತೆಪ್ಪೋತ್ಸವ ಸಮಾಪ್ತಿ.

7 ಭಾನುವಾರ :
ಶ್ರೀ ಆಂಡಾಳ್
ನೀರಾಟ್ಟೋತ್ಸವ ಆರಂಭ.

13 ಶನಿವಾರ :
ಶ್ರೀ ಆಂಡಾಳ್
ನೀರಾಟ್ಟೋತ್ಸವ ಸಮಾಪ್ತಿ.

14 ಭಾನುವಾರ :
ಮಕರಸಂಕ್ರಮಣ. ರಾ 2-35

15 ಸೋಮವಾರ :
ಮಕರಸಂಕ್ರಾಂತಿ.

16 ಮಂಗಳವಾರ :
ಶ್ರೀ ಗೋದಾಪರಿಣಯೋತ್ಸವ.
ತಿರುಮಲೆಯಲ್ಲಿ ಪಾರುವೇಟ ಉತ್ಸವ.

26 ಶುಕ್ರವಾರ :
ಭಾರತ ಗಣತಂತ್ರ ದಿನ.

27 ಶನಿವಾರ :
ರಥ ಸಪ್ತಮಿ.

31 ಬುಧವಾರ :
ಶ್ರೀ ಗೋವಿಂದರಾಜಸ್ವಾಮಿ
ತೆಪ್ಪೋತ್ಸವಾರಂಭ.



# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಜನವರಿ 1996

ಜನವರಿಯಲ್ಲಿ ಪುರಂದರದಾಸರ ಆರಾಧನೆ ನಾಡಿನಾದ್ಯಂತವೂ, ಹೊರಗೂ ನಡೆಯುತ್ತವೆ. ತತ್ಸಂಬಂಧವಾಗಿ ಅವರ ಜೀವನ ಸಾಹಿತ್ಯವನ್ನು ಕುರಿತು ಆತ್ಮೀಯತೆಯಿಂದ ನೆನೆಯುವ ಮೂರು ಲೇಖನಗಳನ್ನು ಪ್ರಸ್ತುತ ಪಡಿಸಲಾಗಿದೆ.

1. **ಪುರಂದರ ದಾಸರು :** ಶ್ರೀನಿವಾಸುಲು - ದಾಸರ ಜೀವನ ಸಾಧನೆಯ ಚಿತ್ರ.

2. **ದಾಸರು - ಭಕ್ತಿ :** ಕೃಷ್ಣಮನಗುಂದ - ದಾಸರ ಕೀರ್ತನೆಗಳ ಮುಖ್ಯಲಕ್ಷಣ-ಗುರಿ.

3. **ವಿಹಿತಕರ್ಮವ ಮಾಡು :** ಶ್ರೀನಿವಾಸ ಮಠದ-ದಾಸರ ಒಂದು ಕೃತಿಯ ವಿಶ್ಲೇಷಣೆ.

4. **ಭಗವಾನ್ ಸೂರ್ಯನಾರಾಯಣ :** ರಥ ಸಪ್ತಮಿಗಾಗಿ ಸೂರ್ಯನಾರಾಯಣನನ್ನು ಕುರಿತಾದ ಕಂದಾಡೈ ಕೇಶವನ್ ಅವರ ವೈಶಿಷ್ಟ್ಯಪೂರ್ಣ ಲೇಖನ.

5. **ಮಕರ ಸಂಕ್ರಾಂತಿ :** ಮಕರ ಸಂಕ್ರಾಂತಿಯ ವಿಶೇಷ, ವ್ಯಾಪ್ತಿಗಳನ್ನು ಬಣ್ಣಿಸುವ ಲೇಖನ - ಸಾಲೀಮಠ ದೊಡ್ಡಯ್ಯಶಾಸ್ತ್ರಿಗಳಿಂದ.

6. **ಭಕ್ತಿ :** ಭಕ್ತಿ ಬೇಕು ಅವನ ನೆನೆಯಲು - ನೆನೆವಲ್ಲಿ, ನೆನೆದಾಗ. ವಿವರಗಳನ್ನು ಒದಗಿಸಿದ್ದಾರೆ ವಿಮಲಾರಾಮಚಂದ್ರ ಕುಲಕರ್ಣಿ.

7. **ಆಚಾರ್ಯ ಮಧ್ವರು :** ಕರ್ನಾಟಕದ ಶಿಖರೋಪಮ ತಾತ್ವಿಕರಲ್ಲಿ ಒಬ್ಬರಾದ ಆನಂದ ತೀರ್ಥರ ಸಾಹಿತ್ಯವನ್ನು ಸರ್ವಮೂಲವೆಂದೇ ಕರೆಯಲಾಗುತ್ತದೆ. ಮಧ್ವನವಮಿಯ ಪ್ರಯುಕ್ತ ಎಸ್.ಕೆ. ಆಚಾರ್ಯರ ಲೇಖನ.

8. **1996 ರ ವರ್ಷ ಭವಿಷ್ಯ :** ಅನಂತ ಚಿಂತಾಮಣಿ ಜ್ಯೋತಿಷೀ ಅವರಿಂದ.

ಜೊತೆಗೇ ಮತ್ತೂ ಹಲವಾರು ಸಾಮಯಿಕ ಲೇಖನಗಳೊಂದಿಗೆ ಪ್ರಕಟಗೊಳ್ಳುತ್ತದೆ, ಜನವರಿ 1996 ರ ಸಪ್ತಗಿರಿ ಮಾಸಪತ್ರಿಕೆ.

ತಮ್ಮ ಪ್ರತಿಯನ್ನು ಕಾಯ್ದಿರಿಸಿ.

ವಾರ್ಷಿಕ ಚಂದಾ (ಏಪ್ರಿಲ್ 1996 ರಿಂದ) ರೂ. 48-00 ಮಾತ್ರ.

ವಾರ್ಷಿಕ ಚಂದಾ ಹಣವನ್ನು - ಸಂಪಾದಕರು ತಿ.ತಿ.ದೇ. ತಿರುಪತಿ - ಇವರಿಗೆ ಎಂ.ಓ. / ಡಿ. ಡಿ.ಯ ಮೂಲಕ ಕಳುಹಿಸಬಹುದು.

# ವಾರ್ತಾಲಹರಿ ಕರ್ನಾಟಕದಾಚ್ಚೆ...

## ಉಡುಪಿಯಲ್ಲಿ ಮಹಾಭಾರತ ಪ್ರವಚನ ಮಂಗಲ




ಶ್ರೀ ಕ್ಷೇತ್ರ ಉಡುಪಿಯಲ್ಲಿ, ಶ್ರೀ ಮಧ್ವ ಜಯಂತಿ ಪ್ರಯುಕ್ತ, ಪಲಿಮಾರು ಮಠದ ಹಿರಿಯ ಶ್ರೀಪಾದರಾದ ಯತಿಶೇಖರ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರು ಮತ್ತು ಅವರ ಶಿಷ್ಯರಾದ ಶ್ರೀ ಶ್ರೀ ವಿದ್ಯಾಧೀಶ ತೀರ್ಥ ಶ್ರೀಪಾದರು ನಿಯೋಜಿಸಿದ ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದ ಆಚಾರ್ಯರ ಮಹಾಭಾರತ ಪಾತ್ರ ಪರಿಚಯ ಎನ್ನುವ ಪ್ರವಚನ ಮಾಲಿಕೆಯು ಅಪಾರ ಭಕ್ತ ಭಾವುಕರನ್ನು ಆಕರ್ಷಿಸಿತು. ಉಡುಪಿಯ ರಥಬೀದಿಯಲ್ಲಿರುವ ವಿದ್ಯಾಮಾನ್ಯ ಸಭಾಭವನದಲ್ಲಿ ತಾ: 25-9-1995 ರಂದು ಪ್ರಥಮ ನವರಾತ್ರಿಯಂದು ಆರಂಭವಾದ ಈ ಮಂಗಳ ಕಾರ್ಯಕ್ರಮವು 31 ದಿನಗಳ ಪರ್ಯಂತ ನಡೆದು ಮಂಗಲೋತ್ಸವವು ತಾ: 25-10-1995 ಬಲಿಪಾಡ್ಯದಂದು ನಡೆಯಿತು.

ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಪೇಜಾವರ ಮಠದ ಹಿರಿಯ ಸ್ವಾಮಿಗಳಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು ವಹಿಸಿದ್ದರು. ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಮಹಾಭಾರತ ಮೇಲ್ನೋಟಕ್ಕೆ ಕುರುಪಾಂಡವರ ಕಥೆಯಾಗಿದ್ದರೂ, ಮಾನವರ ಅಂತರಂಗದ ಚಿತ್ರಣವೂ ಆಗಿದೆ ಎಂದರು. ಯಾವಾಗಲೂ ಈ ಪ್ರಪಂಚದಲ್ಲಿ ಸಜ್ಜನರಿಗಿಂತ ದುರ್ಜನರೇ ಹೆಚ್ಚು. ಜ್ಞಾನ, ಭಕ್ತಿ ವೈರಾಗ್ಯದ ಮೂರ್ತಿಗಳಾದ ಪಾಂಡವರು ಕೇವಲ ಐದು ಮಂದಿ; ಆದರೆ, ಕಾಮ ಕ್ರೋಧಾದಿ ಅರಿಷಡ್ವರ್ಗಗಳಿಗೆ ಬಲಿಯಾದ ಕೌರವರು ನೂರು ಮಂದಿ. ಸಾಮಾಜಿಕ, ರಾಜಕೀಯ ಹಾಗೂ ಆಧ್ಯಾತ್ಮಿಕ ಸಂದೇಶಗಳನ್ನೊಳಗೊಂಡ ಮಹಾಭಾರತ ವ್ಯಾಸರ ಅಮೂಲ್ಯ ಕೃತಿ. ಇದರ ರಹಸ್ಯ ಸಂದೇಶಗಳನ್ನು ಜನರಿಗೆ ತಲುಪಿಸುವ ವಿದ್ಯಾವಾಚಸ್ಪತಿ ಗೋವಿಂದ ಆಚಾರ್ಯರು ಅಭಿನಂದನಾರ್ಹರು ಎಂದರು.

ಈ ಪ್ರವಚನ ಮಾಲಿಕೆಯನ್ನು ಸಂಯೋಜಿಸಿದ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು, ತಮ್ಮ ಅನುಗ್ರಹ ಭಾಷಣದಲ್ಲಿ, ಮೋಕ್ಷಮಾರ್ಗಕ್ಕೆ ವಿರುದ್ಧವಲ್ಲದ ಧರ್ಮಾರ್ಥ ಕಾಮವೆ ಸರಿಯಾದ ಚಿಂತನೆ ಎಂದರು. ಬನ್ನಂಜೆ ಆಚಾರ್ಯರನ್ನು ಶಾಲು, ಸಂಭಾವನೆ ನೀಡಿ ಗೌರವಿಸಿದ ಸ್ವಾಮಿಗಳು ಪ್ರತಿ ವರ್ಷ ಇದೇ ರೀತಿ ಮಧ್ವ ಜಯಂತಿ ಪ್ರಯುಕ್ತ ಒಂದು ತಿಂಗಳ ಕಾರ್ಯಕ್ರಮ ನಡೆಸುವುದಾಗಿ ಘೋಷಿಸಿದರು.

ಆ ಬಳಿಕ ಪಲಿಮಾರು ಮಠದ ಕಿರಿಯ ಶ್ರೀಪಾದರಾದ ಶ್ರೀ ಶ್ರೀ ವಿದ್ಯಾಧೀಶತೀರ್ಥಶ್ರೀಪಾದರು ಮಾತನಾಡಿದರು. ಸಭೆಯಲ್ಲಿ ಶ್ರೀ ಸುಬ್ರಹ್ಮಣ್ಯ ಮಠಾಧೀಶರಾದ ಶ್ರೀ ಶ್ರೀ ವಿದ್ಯಾಭೂಷಣತೀರ್ಥ ಶ್ರೀಪಾದರೂ, ಬಾಳಗಾರು ಮಠಾಧೀಶರಾದ ಶ್ರೀ ಶ್ರೀ ರಘುಭೂಷಣ ತೀರ್ಥ ಶ್ರೀಪಾದರೂ ಮುಖ್ಯ ಅತಿಥಿಗಳಾಗಿ ಉಪಸ್ಥಿತರಿದ್ದರು.

### ಶ್ರೀ ಬನ್ನಂಜೆ ಸನ್ಮಾನ

ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದ ಆಚಾರ್ಯರ ಷಷ್ಟ್ಯಬ್ದಿ ಸಮಾರಂಭವು ಭಂಡಾರ ಕೇರಿ ಮತ್ತು ಪಲಿಮಾರು ಮಠದ ಹಿರಿಯ ಸ್ವಾಮಿಗಳಾದ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರ ಉಪಸ್ಥಿತಿಯಲ್ಲಿ ಸುಬ್ರಹ್ಮಣ್ಯ ಮಠದ ಶ್ರೀ ಶ್ರೀ ವಿದ್ಯಾಭೂಷಣ ತೀರ್ಥ ಶ್ರೀಪಾದರ ಅಧ್ಯಕ್ಷತೆಯಲ್ಲಿ ಉಡುಪಿಯ ರಥಬೀದಿಯಲ್ಲಿರುವ ಪಲಿಮಾರು ಮಠದ ವಿದ್ಯಾಮಾನ್ಯ ಸಭಾಭವನದಲ್ಲಿ ತಾ: 26-10-1995 ರಲ್ಲಿ ನಡೆಯಿತು.

ಮುಖ್ಯ ಅತಿಥಿಗಳಾಗಿ ಜ್ಞಾನಪೀಠ ಪ್ರಶಸ್ತಿ ವಿಜೇತ, ಹಾಗೂ ಕೇಂದ್ರ ಸಾಹಿತ್ಯ ಅಕಾಡಮಿಯ ಅಧ್ಯಕ್ಷ ಡಾ|| ಯು. ಆರ್. ಅನಂತಮೂರ್ತಿಯವರು ಮತ್ತು ಖ್ಯಾತ ಚಲನ ಚಿತ್ರ ನಟ ಹಾಗೂ ನಿರ್ದೇಶಕ ಜಿ.ವಿ. ಐಯ್ಯರ್ ಸಭೆಯಲ್ಲಿ ಭಾಗವಹಿಸಿದ್ದರು.

ಮುಖ್ಯ ಅತಿಥಿಗಳಾದ ಅನಂತಮೂರ್ತಿಯವರು ಮಾತನಾಡುತ್ತಾ, ಭಾರತದ ಸಂಸ್ಕೃತಿ ಉಳಿಯಬೇಕಿದ್ದರೆ ಆಧ್ಯಾತ್ಮಿಕತೆ ಹಾಗೂ ಲೌಕಿಕತೆಯ ನಡುವೆ ಸಂಪರ್ಕ - ಸಮನ್ವಯ ಸಾಧಿಸಬಲ್ಲ ಶಾಸ್ತ್ರಿಗಳ, ವಿದ್ವಾಂಸರ ಅವಶ್ಯಕತೆ ಇದೆ ಎಂದರು. ಧ್ಯಾನಶೀಲರಾದ ಹಾಗೂ ಗ್ರಂಥಾಧ್ಯಯ



ನಾಸಕ್ತರಾದ ಯತಿಗಳಿಗೂ, ಲೌಕಿಕರಿಗೂ ದೇಶಾದವರಾಗಿ ಉಭಯರ ನಡುವೆ ಸ್ನೇಹಸೇತುವಾಗಿ ಆಚಾರ್ಯ ಮಧ್ವರ ಅಮರ ಸಂದೇಶಗಳನ್ನು ಶ್ರೀಸಾಮಾನ್ಯರಿಗೆ ತಲುಪಿಸಬೇಕೆಂಬ ತುಡಿತವುಳ್ಳ ಬನ್ನಂಜೆ ಗೋವಿಂದ ಆಚಾರ್ಯರು ಅಭಿನಂದನಾರ್ಹರು ಎಂದರು. ಆಚಾರ್ಯ ಮಧ್ವರ ಸಂಸ್ಕೃತ ಕೃತಿಗಳನ್ನು ಅಪ್ಪಟ ಪ್ರಭಾವಶಾಲಿಯಾಗಿ ಕನ್ನಡಕ್ಕೆ ತಂದಿರುವ ಬನ್ನಂಜೆಯವರು ಈ ಜನಹಿತ ಕಾರ್ಯವನ್ನು ಮುಂದುವರಿಸಬೇಕೆಂದು ಆಶಿಸಿದರು. ಅವರು ಇದೇ ಸಂದರ್ಭದಲ್ಲಿ ಬನ್ನಂಜೆಯವರ "ಕುಂತಿಯ ಪಾತ್ರ ಚಿತ್ರಣ" ಕುರಿತ ಉಪನ್ಯಾಸದ ಧ್ವನಿ ಸುರುಳಿಯನ್ನು ಬಿಡುಗಡೆ ಮಾಡಿದರು.

ಆ ಬಳಿಕ ಇನ್ನೋರ್ವ ಮುಖ್ಯ ಅತಿಥಿಯಾದ ಖ್ಯಾತ ಚಲನಚಿತ್ರ ನಿರ್ದೇಶಕ ಶ್ರೀ ಜಿ. ವಿ. ಐಯ್ಯರ್ ಅವರು "ಶಂಕರಾಚಾರ್ಯ", "ಮಧ್ವಾಚಾರ್ಯ" ಹಾಗೂ "ಭಗವದ್ಗೀತಾ" ಚಿತ್ರಗಳಿಗೆ ಹಿತ ಹಾಗೂ ಲಲಿತವಾದ ಸಂಸ್ಕೃತದಲ್ಲಿ ಸಂಭಾಷಣೆ ಬರೆದುಕೊಟ್ಟ ಶ್ರೀ ಬನ್ನಂಜೆಯವರು ಚಿತ್ರೀಕರಣದ ಹಲವು ಹಂತಗಳಲ್ಲಿ ದೃಶ್ಯ ವರ್ಣ ಹಾಗೂ ಶಬ್ದ ಸಂಯೋಜನೆಗಳನ್ನು ಕುರಿತು ನೀಡಿದ ಸಲಹೆಗಳಿಂದ "ಆಚಾರ್ಯರು ಅಧ್ಯಾತ್ಮಿಕ ಹಾಗೂ ಚಲನ ಚಿತ್ರ ಈ ಉಭಯ ರಂಗಗಳಲ್ಲೂ ಆಚಾರ್ಯರೇ" ಎಂದರು. ಬ್ರಹ್ಮಸೂತ್ರಗಳ ಬಗ್ಗೆ ಆಚಾರ್ಯರಿಗೆ ಇರುವ ಅಪಾರ ಜ್ಞಾನದಿಂದ ಪ್ರಭಾವಿತರಾದ ತಾವು ಅವರ ನೆರವಿನಿಂದ ಅಬಗೆಗೂ ಚಲನಚಿತ್ರವೊಂದನ್ನು ನಿರ್ಮಿಸಲು ಬಯಸುವುದಾಗಿ ತಿಳಿಸಿದರು.

ಆ ಬಳಿಕ ಮಾತನಾಡಿದ ಪಲಿಮಾರು ಮಠದ ಕಿರಿಯ ಶ್ರೀಪಾದರಾದ ಶ್ರೀ ವಿದ್ಯಾಧೀಶರು, ಬಹುಮುಖ ಪ್ರತಿಭಾ ಸಂಪನ್ನರಾದ ಶ್ರೀ ಬನ್ನಂಜೆಯರು ಸಾವಿರಾರು ಮಂದಿಗೆ ಆತ್ಮೀಯರಾಗಿದ್ದಾರೆ. ಸರ್ವಮೂಲ ಗ್ರಂಥಗಳಿಗೆ ವ್ಯಾಖ್ಯಾನ, ರಾಮಾಯಣ, ಭಾರತ, ಭಾಗವತಗಳ ಪ್ರವಚನ ನೀಡಿರುವ ಅವರಲ್ಲಿ ವಿದ್ಯೆ ವಿನಯಗಳು ಮೇಳೈಸಿರುವುದರಿಂದ ತಮ್ಮ ವಿದ್ಯಾಗುರುಗಳಾದ ವಿದ್ಯಾಮಾನ್ಯರಿಂದ ಇಂದು ಸನ್ಮಾನಗೊಳ್ಳುತ್ತಿದ್ದಾರೆ ಎಂದರು. ಅನಂತರ ಮಾತನಾಡಿದ ಬಾಳಗಾರು ಮಠದ ಶ್ರೀ ಶ್ರೀ ರಘುಭೂಷಣ ತೀರ್ಥರು ಸಂಸ್ಕೃತ ಕೃತಿಗಳ ಅನುವಾದ, ಪುರಾಣ ಉಪನಿಷತ್ತುಗಳ ಪ್ರವಚನಗಳಿಂದ ಅದ್ಭುತ ಸ್ಮರಣೆ ಹಾಗೂ ಕವಿತಾಶಕ್ತಿಗಳನ್ನು ಹೊಂದಿದ ಬನ್ನಂಜೆಯವರು ಅಭಿನಂದನಾರ್ಹರೆಂದರು. ಬನ್ನಂಜೆಯವರು ತಮ್ಮ ಸರಳ ಉಪನ್ಯಾಸಗಳನ್ನು ಬರಹಕ್ಕಿಳಿಸಿ ಭಾಷಣಕಾರರನ್ನು ನಿರ್ಮಿಸಬೇಕೆಂದು ಡಾ|| ಭಾಸ್ಕರಾನಂದ ಕುಮಾರ್ ನುಡಿದರು. ಕವಿಯಾಗಿ, ಪತ್ರಕರ್ತರಾಗಿ ಚಲನಚಿತ್ರ ಸಂಭಾಷಣಕಾರರಾಗಿ, ಸಂಸ್ಕೃತ ಕೃತಿಗಳ ಅನುವಾದಕರಾಗಿ, ಆಚಾರ್ಯ ಮಧ್ವರ ಸರ್ವಮೂಲಗ್ರಂಥಗಳ ಅನುವಾದಕರಾಗಿ, ಪ್ರವಚನಕಾರರಾಗಿ, ಜನರನ್ನು ಗೆದ್ದಿರುವ ಆಚಾರ್ಯರ ಪ್ರತಿಭೆ ಬಹುಮುಖ ಎಂದು ಡಾ|| ನಿ. ಮುರಾರಿ ಬಲ್ಲಾಳರು ಹೇಳಿದರು. ತನ್ನ ಕೇವಲ 20 ನೆಯ ವಯಸ್ಸಿನಲ್ಲಿ ಬರೆಯಲಾರಂಭಿಸಿ ಹಾಗೂ ಅಷ್ಟ ಮಠದ ವಿದ್ವಾಂಸರೆಂದು ಪರಿಗಣಿಸಲ್ಪಟ್ಟ ಬನ್ನಂಜೆಯವರು ವೇದಾಂತವನ್ನು ಆಡುವುದಲ್ಲದೆ, ಬದುಕಿಯೂ ತೋರಿದರೆಂದು ಶ್ರೀ ಸೀತಾರಾಮ ಅಡಿಗರು ಹೇಳಿದರು.

ಆ ಬಳಿಕ ಬನ್ನಂಜೆಯವರ ವಿದ್ಯಾಗುರು ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು, ಆಚಾರ್ಯರಿಗೆ ನವರತ್ನ ಉಂಗುರ, ಶಾಲು, ಮಾನಪತ್ರ "ವಿದ್ಯಾರತ್ನಾಕರ" ಎಂಬ ಬಿರುದು ನೀಡಿ ಆಶೀರ್ವದಿಸಿದರು. ಆಚಾರ್ಯರಿಂದ ಇನ್ನೂ ಹಲವು ವರ್ಷ ಆಧ್ಯಾತ್ಮ ವಿದ್ಯಾ ಪ್ರಸಾರ ನಡೆಯಲಿ ಎಂದರು. ಸನ್ಮಾನಕ್ಕೆ ಉತ್ತರಿಸಿದ ಬನ್ನಂಜೆಯವರು ತಮ್ಮ ಸಾಧನೆಯ ಹಿಂದೆ ತಮ್ಮ ವಿದ್ಯಾಗುರು ವಿದ್ಯಾಮಾನ್ಯರ, ಆಚಾರ್ಯ ಮಧ್ವರ, ಶ್ರೀ ವೇದವ್ಯಾಸರ ಅಪೂರ್ವ ವ್ಯಕ್ತಿತ್ವದ ಸ್ಫೂರ್ತಿ ಇದೆ ಎಂದರು. ಸಭಾಧ್ಯಕ್ಷರಾದ ಗಾನಯೋಗಿ ಶ್ರೀ ಸುಬ್ರಹ್ಮಣ್ಯ ಮಠಾಧೀಶರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ, ಬನ್ನಂಜೆಯವರ ಪ್ರವಚನದಲ್ಲಿ ಆಳವಾದ ಪ್ರತಿಭೆ, ಆಚಾರ್ಯ ಮಧ್ವರ ಅಪಾರ ಅನುಗ್ರಹವಿದೆ ಎಂದರು. ಅವರು ಬನ್ನಂಜೆಯವರು ರಚಿಸಿದ "ಪಾಜಕದ ಗಿಣಿಯಿದ್ಯೆ" ಎಂಬ ಹಾಡನ್ನು ಹಾಡುತ್ತಾ ತಮ್ಮ ಭಾಷಣ ಮುಗಿಸಿದರು.

ಆ ಬಳಿಕ ವಿವಿಧ ಸಂಘ ಸಂಸ್ಥೆಗಳು, ನೂರಾರು ಅಭಿಮಾನಿಗಳು ಶ್ರೀ ಬನ್ನಂಜೆಯವರಿಗೆ ಹಾರಾರ್ಪಣೆಗೈದರು. ಆರಂಭದಲ್ಲಿ ಶ್ರೀ ವೇದವ್ಯಾಸ ತಂತ್ರಿಗಳು ಸ್ವಾಗತಿಸಿದರು. ಅಂತ್ಯದಲ್ಲಿ ಕಾರಂಜಿ ಉಪಾಧ್ಯಾಯರು ಧನ್ಯವಾದ ಅರ್ಪಿಸಿದರು.

## ವಿಜಯದಾಸರ ಆರಾಧನೆ

ವಿಜಯದಾಸರು ಹುಟ್ಟಿದ ಗ್ರಾಮವಾದ ಚೀಕಲ ಪರವಿಯಲ್ಲಿ (ಮಾನವಿತಾಲ್ಲೂಕು - ರಾಯಚೂರು ಜಿಲ್ಲೆ) ದಾಸರ ಆರಾಧನೆಯನ್ನು ಸ್ಥಳೀಯ ಶ್ರೀ ವಿಜಯವಿಠಲ ಸೇವಾಸಮಿತಿ, ಹಾಗೂ ತಿ.ತಿ.ದೇ. ದಾಸ ಸಾಹಿತ್ಯ ಪ್ರಾಜೆಕ್ಟ್‌ಗಳ ಸಂಯುಕ್ತ ಆಶ್ರಯದಲ್ಲಿ ಇದೇ ನವಂಬರ್ 1 ರಿಂದ 4 ರ ವರೆಗೆ ಆಚರಿಸಲಾಯಿತು. ತದಂಗವಾಗಿ ಭಕ್ತರಿಂದ ಒಂದು ಲಕ್ಷ ಶ್ರೀ ವಿಜಯಕವಚದ ಪಾರಾಯಣ ಕಾರ್ಯಕ್ರಮ ಅಭೂತಪೂರ್ವವಾಗಿ ಏಳುಲಕ್ಷ ವಿಜಯಕವಚ ಪಾರಾಯಣವಾಗಿ ಯಶಸ್ವಿಯಾಯಿತು.

ಶ್ರೀಪಾದರಾಜರು, ಸ್ಥಾಪಿಸಿದ ಅಶ್ವತ್ಥ ಲಕ್ಷ್ಮೀನರಸಿಂಹ ದೇವರ ಸನ್ನಿಧಿಯಲ್ಲಿ ಮುಳಬಾಗಿಲಿನ ನೃಸಿಂಹ ತೀರ್ಥದ ಶ್ರೀಪಾದರಾಜ ಮಠದ ಶ್ರೀ ಶ್ರೀ ವಿಜ್ಞಾನ ನಿಧಿತೀರ್ಥರ ಅಧ್ಯಕ್ಷತೆಯಲ್ಲಿ ನಾಲ್ಕು ದಿನ ನಡೆದ ಕಾರ್ಯಕ್ರಮದಲ್ಲಿ ಮೊದಲ ದಿನ ಡಾ|| ಮಂದಾಕಿನಿ ಅವರ 'ಭಕ್ತಿಯೋಗಿ ಶ್ರೀ ವಿಜಯದಾಸರು' ಕೃತಿಯನ್ನು ಶ್ರೀಪಾದರು ಬಿಡುಗಡೆ ಮಾಡಿದರು. ಗಮಕಿ ಶ್ರೀ ವಾಸುದೇವರಾವ್ ಅವರಿಂದ ಹರಿಕಥೆ ನಡೆಯಿತು. ಶ್ರೀಮತಿ ವಿಜಯಲಕ್ಷ್ಮಿ ಕಲ್ಲೂರಕರ್ ಅವರಿಂದ ದಾಸವಾಣಿ ಕಾರ್ಯಕ್ರಮ ಪ್ರಸ್ತುತವಾಯಿತು.

ದಾಸ ಸಾಹಿತ್ಯದ ವತಿಯಿಂದ ಮೊದಲ ಎರಡು ದಿನಗಳಲ್ಲಿ ಉಪನ್ಯಾಸಗಳಾದವು. ಬೆಂಗಳೂರಿನ ಡಾ|| ವಿಜಯಸಿಂಹಾಚಾರ್ಯರು, ಶ್ರೀ ಆನಂದತೀರ್ಥಾಚಾರ್ಯರು ಹಾಗೂ ಶ್ರೀಪಾದಂಗಳವರ ಅನುಗ್ರಹ ಭಾಷಣ ನಡೆದವು. ಅನಂತಪುರದ ಶ್ರೀ ಸದಾನಂದ ಶಾಸ್ತ್ರಿಗಳು ಹರಿಕಥೆ ಮಾಡಿಕೊಟ್ಟರು.

ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು ಆರಾಧನಾ ಕಾರ್ಯಕ್ರಮದಲ್ಲಿ ಭಾಗವಹಿಸಿ ಅನುಗ್ರಹ ಆಶೀರ್ವಚನಗಳನ್ನು ನೀಡಿದರು.

ನಗರ ಪ್ರದಕ್ಷಿಣೆ ಸಂಪ್ರದಾಯ ಭಜನಗೋಷ್ಠಿಗಳಲ್ಲಿ ಪರಿಮಳ ಭಜನ ಮಂಡಳಿ ಕುಂಬಳ, ಗುರುರಾಜ ಭಜನ ಮಂಡಳಿ ಯಲಬುರ್ಗ, ಆಂಜನೇಯ ಭಜನ ಮಂಡಳಿ ಕವುತಾಳ - ಮೊದಲಾದವರು ಭಾಗವಹಿಸಿದ್ದರು.

ವಿಜಯದಾಸರ ವಂಶಸ್ಥರೂ ಈ ವರ್ಷದ ಹಕ್ಕುದಾರರೂ ಆದ ಶ್ರೀ ಜಯಸಿಂಹ ದಾಸರು ಹಾಗೂ ಅರ್ಚಕ ಶ್ರೀ ರಾಮಾಚಾರ್ಯರನ್ನು ತಿ.ತಿ.ದೇ. ಪರವಾಗಿ ಸನ್ಮಾನಿಸಲಾಯಿತು. ದಾಸ ಸಾಹಿತ್ಯದ ವತಿಯಿಂದ ಶ್ರೀ ಕೆ. ವಾದಿರಾಜಾರಾವ್ ಭಾಗವಹಿಸಿದ್ದರು.



## ಶ್ರೀ ಬಾಲಾಜೀ ವಿಕಲಾಂಗ ಆಸ್ಪತ್ರೆ
## ತಿ. ತಿ. ದೇ. ತಿರುಪತಿ.

ತಿರುಮಲೆ ತಿರುಪತಿ ದೇವಸ್ಥಾನಗಳ ಶ್ರೀ ಬಾಲಾಜೀ ವಿಕಲಾಂಗರ ಆಸ್ಪತ್ರೆಯಲ್ಲಿ ಕೃತಕ ಅವಯವಗಳನ್ನು ವಿಕಲಾಂಗರಿಗೆ ಉಚಿತವಾಗಿ ನೀಡುವ ಯೋಜನೆಯಿದ್ದು, ಸದರಿ ಮಾನವೋಪಯೋಗಿ ಯೋಜನೆಗೆ ದಾನಿಗಳು ಉದಾರವಾಗಿ ವಂತಿಗೆಯನ್ನು ನೀಡಲು ಅವಕಾಶವಿದೆ.


ಶ್ರೀ ಶ್ರೀ ವಿಜ್ಞಾನ ನಿಧಿ ತೀರ್ಥ ಶ್ರೀಪಾದಂಗಳು


ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀಪಾದಂಗಳು


ಶ್ರೀ ಸಂಜೀವರಾವ್


ಶ್ರೀ ಸದಾನಂದಶಾಸ್ತ್ರಿ


ಗುರುರಾಜ ಭಜನಾ ಮಂಡಳಿ ಯಲಬುರ್ಗ


ಪರಿಮಳ ಭಜನಾಮಂಡಳಿ ಹೊಂಬಳ


ಆಂಜನೇಯ ಭಜನಾಮಂಡಳಿ ಕವುತಾಳ

# ವೈಭವದ ಬ್ರಹ್ಮೋತ್ಸವಗಳು

ತಿರುಚಾನೂರಿನಲ್ಲಿ ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವಗಳು ಅತ್ಯಂತ ವೈಭವದಿಂದಲೂ, ಅಪೂರ್ವ ಸಡಗರದಿಂದಲೂ ನವಂಬರ್ 19 ರಿಂದ 27 ರ ವರೆಗೆ ನಡೆದು ಅತಿಹೆಚ್ಚಿನ ಜನವನ್ನು ಆಕರ್ಷಿಸಿ ಯಶಸ್ವಿಯಾಯಿತು.

18-1-95 ರಂದು ಸಂಜೆ ಸೇನಾಪತಿ ಉತ್ಸವ, ಅಂಕುರಾರ್ಪಣೆಗಳು ವಿಧಿವತ್ತಾಗಿ ನಡೆದವು.

ಅಂದು ಬೆಳಗ್ಗೆಯಿಂದ ಸಂಜೆಯವರೆಗೆ ಅಮ್ಮನವರಿಗೆ ಲಕ್ಷ ಕುಂಕುಮಾರ್ಚನೆ ನಡೆಯಿತು. ತತ್ಸಂದರ್ಭದಲ್ಲಿ ಅಹೋಬಿಲಮಠದ ಶ್ರೀ ಶ್ರೀಮನ್ನಾರಾಯಣ ಯತೀಂದ್ರ ಮಾಹಾದೇಶಿಕನ್ ಸ್ವಾಮಿಗಳೂ, ಆಂಧ್ರಪ್ರದೇಶದ ಮುಖ್ಯಕಾರ್ಯದರ್ಶಿ ಶ್ರೀ ರಾಜಾಜಿ ಅವರೂ ಭಾಗವಹಿಸಿದ್ದರು.

19-11-95 ರಂದು ವೇದ ಘೋಷದ ಮಧ್ಯೆ ಧ್ವಜಾರೋಹಣವಾಗಿ ಬ್ರಹ್ಮೋತ್ಸವದ ಆರಂಭದ ಘೋಷಣೆಯಾಯಿತು. ಈ ಬಾರಿಯ ಬ್ರಹ್ಮೋತ್ಸವದ ವಿಶೇಷವೆಂದರೆ ತಿರುಚಾನೂರಿನ ಬ್ರಹ್ಮೋತ್ಸವವನ್ನು ತಿರುಮಲೆಯ ಬ್ರಹ್ಮೋತ್ಸವದಷ್ಟೇ ಘನವಾಗಿ, ಚೆಂದವಾಗಿ ಮಾಡಬೇಕೆಂಬ ಕಾರ್ಯನಿರ್ವಹಣಾಧಿಕಾರಿಗಳ ಸಂಕಲ್ಪದಿಂದಾಗಿ ತಿರುಚಾನೂರು ತೋಳಪ್ಪ ಉದ್ಯಾನವನದಲ್ಲಿ ಬೆಳಗ್ಗೆ ವಿಷ್ಣು ಸಹಸ್ರನಾಮ ಪಾರಾಯಣದಿಂದ ಆರಂಭವಾಗಿ ರಾತ್ರಿಯವರೆಗೆ ಸಾಂಸ್ಕೃತಿಕ ಕಾರ್ಯಕ್ರಮಗಳು ದಿನವೂ ನಡೆದವು, ಪ್ರತಿದಿನವೂ ಅಮ್ಮನವರ ಕಲ್ಯಾಣೋತ್ಸವಗಳು ನಡೆದವು. ಮಧ್ಯಾಹ್ನಗಳಲ್ಲಿ ಮಹಾಪುರುಷರ ಸಂದೇಶ - ಅನುಗ್ರಹ ಭಾಷಣಗಳೂ,





ಸಂಜೆಗಳಲ್ಲಿ ಖ್ಯಾತ ಸಂಗೀತ ವಿದ್ವಾಂಸರ ಸಂಗೀತ ಕಚೇರಿಗಳೂ, ಪ್ರಾತಃಕಾಲಗಳಲ್ಲಿ ದಾಸಸಾಹಿತ್ಯ ಪ್ರಬಂಧ ಸಾಹಿತ್ಯ ಪ್ರಾಜೆಕ್ಟ್ ಕಾರ್ಯಕ್ರಮಗಳೂ, ಹೆಚ್ಚಿನ ಭಕ್ತರನ್ನು ಆಕರ್ಷಿಸಿದವು. ಇಡೀ ತಿರುಚಾನೂರು ಪುಷ್ಪಾಲಂಕಾರ ವಿದ್ಯುದ್ದೀಪಾಲಂಕಾರದಿಂದ ನವವೈಕುಂಠವೆಂಬಂತೆ ಕಂಡು ಬರುತ್ತಿದ್ದಿತು.

ಬೆಂಗಳೂರಿನಿಂದ ಪರಕಾಲಮಠದ ಶ್ರೀರಂಗ ರಾಮಾನುಜಸ್ವಾಮಿಗಳು ಬ್ರಹ್ಮೋತ್ಸವದಲ್ಲಿ ಪಾಲುಗೊಳ್ಳಲು ಆಗಮಿಸಿದ್ದರೆ ಕಂಚಿಯಿಂದ ಶ್ರೀ ಶ್ರೀ ಜಯೇಂದ್ರ ಸರಸ್ವತೀ ಸ್ವಾಮಿಗಳೂ, ಶ್ರೀ ಶ್ರೀ ವಿಜಯೇಂದ್ರ ಸರಸ್ವತೀ ಸ್ವಾಮಿಗಳೂ ಗರುಡೋತ್ಸವದಂದು ಅಮ್ಮನವರ ಉತ್ಸವದಲ್ಲಿ ಭಾಗವಹಿಸಿದ್ದರು. ವಿವಿಧ ಸ್ಥಳಗಳಿಂದ ಭಜನೆ, ಕೋಲಾಟದ ಬೃಂದಗಳೂ ಬ್ರಹ್ಮೋತ್ಸವದ ಮೆರವಣಿಗೆಗಳಲ್ಲಿ ಭಾಗವಹಿಸಿದ್ದವು.

ಮುಖ್ಯವಾಗಿ ಈ ಬಾರಿಯ ಬ್ರಹ್ಮೋತ್ಸವಗಳಲ್ಲಿ ಜನವನ್ನು ಆಕರ್ಷಿಸಿದ್ದು ಎಂದರೆ ದಿನವೂ ವಿವಿಧ ವಾಹನಗಳಲ್ಲಿ ಊರಬೀದಿಗಳಲ್ಲಿ ಮೆರವಣಿಗೆ ಬಂದ ಅಮ್ಮನವರ ಅಲಂಕಾರಗಳು - ವಿಜಯಲಕ್ಷ್ಮಿ ಜಯಲಕ್ಷ್ಮಿ ವಿದ್ಯಾಲಕ್ಷ್ಮಿ - ಹೀಗೆ ಅಪೂರ್ವ ಶೋಭೆಯಿಂದ ಕೂಡಿದ ನವನವ ಅಲಂಕಾರದಲ್ಲಿ ಅಮ್ಮನವರು ವೇದಘೋಷದ, ನಡುವೆ ಪುರಬೀದಿಗಳಲ್ಲಿ ಬಿಜಯ ಮಾಡುತ್ತಿರಲು ಭಕ್ತರು ಉಘೇ ಉಘೇ ಎಂದು ಘೋಷಿಸುತ್ತ ಅಮ್ಮನವರನ್ನು ಸ್ವಾ[illegible]ತಿಸಿದರು.

ತಿರುಚಾನೂರು ಬ್ರಹ್ಮೋತ್ಸವದಲ್ಲಿನ ವೈಶಿ[illegible]ವೆಂದರೆ ಅದರ ಚಕ್ರಸ್ನಾನ. ಪಂಚಮಿ ತೀ[illegible]ವೆಂಬ ಈ ಉತ್ಸವ ಅಮ್ಮನವರು ಪದ್ಮಸರೋ[illegible]ರದಲ್ಲಿ ಅವತಾರ ತಾಳಿದ ಕಾರ್ತೀಕ ಪಂಚ[illegible]ಯಂದು ನಡೆಯುತ್ತದೆ. ಈ ದಿನದಂದು ತಿ[illegible]ಮಲೆಯ ಬೆಟ್ಟದಿಂದ ಹರಿದ್ರಾಕುಂಕುಮ, ರೇ[illegible]ವಸ್ತುಗಳು ಅಮ್ಮನವರಿಗಾಗಿ ತಿರುಚಾನೂರು ಸೇ[illegible]ತ್ತವೆ. ಇಲ್ಲಿನ ಪಂಚಮಿ ತೀರ್ಥ ಮಂಟಪದ[illegible] ಅಮ್ಮನವರ ಉತ್ಸವಮೂರ್ತಿಯ ಅಭಿಷೇಕವಾ[illegible] ಚಕ್ರಸ್ನಾನ ಸಾಂಪ್ರದಾಯಕವಾಗಿ ನಡೆಯುತ್ತದೆ. ಭಾರಿಯ ಚಕ್ರಸ್ನಾನದಲ್ಲಿ ಅತಿಹೆಚ್ಚಿನ ಜನ ಪಾ[illegible]ಗೊಂಡಿದ್ದರು. ಚಕ್ರಸ್ನಾನದ ಹೊತ್ತಿನಲ್ಲಿ ತಿರು[illegible]ನೂರಿನ ಪದ್ಮಸರೋವರದಲ್ಲಿ ಭಕ್ತರೂ ಸ್ನಾ[illegible] ಮಾಡುವುದು ಆಚಾರ. ಈ ಬಾರಿ ಪದ್ಮಸರೋ[illegible]ರದ ನೀರು ಕಾಣಿಸದಷ್ಟು ಜನಸಂದಣಿಯಿದ್ದಿ[illegible]ದರೆ ಇಡೀ ಯಾತ್ರಿಕ ಸಂವಣೆಯನ್ನು ಅಂದಾ[illegible] ಮಾಡಬಹುದು.

ಬ್ರಹ್ಮೋತ್ಸವದಲ್ಲಿ ಆಲಯದಲ್ಲಿ ಪ್ರಸಾದವ[illegible] ಚಿಕ್ಕ ಲಾಡು ವಿತರಣೆಯೇ ಅಲ್ಲದೆ ಪಂಚಮಿ[illegible]ರ್ಥದಂದು 25 ಸಾವಿರಮಂದಿಗೆ ಅನ್ನದಾನವ[illegible] ವಿಸ್ತರಿಸಲಾಗಿದ್ದಿತು. ಪಂಚಮಿ ತೀರ್ಥದಂ





ಬ್ರಹ್ಮೋತ್ಸವಕ್ಕಾಗಿ ನಡೆಸಲಾಯಿತು. ಯಾತ್ರಿಕ ಭಕ್ತರ ಪ್ರಯೋಜನಕ್ಕಾಗಿ ತಿ.ತಿ.ದೇ. ಧಾರ್ಮಿಕ ಪುಸ್ತಕಗಳ, ಪದಕಗಳ, ವೀಡಿಯೋ ಆಡಿಯೋ ಕ್ಯಾಸೆಟ್‌ಗಳ ವಿಕ್ರಯವೂ ನಡೆಯಿತು.

ಭಾರತದ ರಾಷ್ಟ್ರಪತಿ ಶ್ರೀ ಶಂಕರದಯಾಳ ಶರ್ಮ ಅವರು ಶ್ರೀಮತಿ ವಿಮಲಾಶರ್ಮ ಅವರೊಡನೆ ಶುಕ್ರವಾರದಂದು ಗಜವಾಹನದ ದಿನದಲ್ಲಿ ಅಮ್ಮನವರನ್ನು ಸಂದರ್ಶಿಸಿ, ಉತ್ಸವ ಮೂರ್ತಿಗಳನ್ನು ಆರಾಧಿಸಿದರು.



ಮೆರವಣಿಗೆಯಲ್ಲಿ ಬಂದ ಪಟ್ಟುವಸ್ತ್ರಗಳೊಡನೆ ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಅವರೂ ಕಾಲುನಡಿಗೆಯಲ್ಲಿ ತಿರುಚಾನೂರಿಗೆ ಬಂದರೆ, ಅವುಗಳನ್ನು ಊರಾಚೆಯಲ್ಲೇ ಎದಿರುಗೊಂಡು ಸ್ವಾಗತಿಸಿದರು ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ ಕುಮಾರ್, ಜೆ.ಇ.ಓ. ಶ್ರೀ ಸತ್ಯನಾರಾಯಣರಾವ್ ಮೊದಲಾದವರು.

ತಿರುಮಲೆಯಿಂದಲೂ, ತಿರುಪತಿಯಿಂದಲೂ, ಇತರ ಪ್ರಾಂತಗಳಿಂದಲೂ ವಿಶೇಷ ಬಸ್‌ಗಳನ್ನು





## ಚಿತ್ರಸೂಚಿ

1. ಅಹೋಬಿಲಮಠದ ಶ್ರೀಶ್ರೀಮನ್ನಾರಾಯಣ ಯತೀಂದ್ರ ಮಹಾದೇಶಿಕರ್ ಒಡನೆ ಮಾತನಾಡುತ್ತ ಆಂಧ್ರಪ್ರದೇಶದ ಮುಖ್ಯ ಕಾರ್ಯದರ್ಶಿ ಶ್ರೀ ರಾಜಾಜಿ.
2. ಅಮ್ಮನವರ ಉತ್ಸವದಲ್ಲಿ ಭಾಗವಹಿಸುತ್ತ ಆಚಾರ್ಯ ದ್ವಯರು ಶ್ರೀಶ್ರೀ ಜಯೇಂದ್ರಸರಸ್ವತಿ ಸ್ವಾಮಿಗಳು ಹಾಗು ಶ್ರೀಶ್ರೀ ವಿಜಯೇಂದ್ರ ಸರಸ್ವತಿ ಸ್ವಾಮಿಗಳು.
3. ಪಂಚಮಿತೀರ್ಥದಂದು ಚಕ್ರಸ್ನಾನಕ್ಕೆ ನಡೆದಿರುವ ಏರ್ಪಾಡುಗಳು.



### ತಿ.ತಿ.ದೇ. ಪುಸ್ತಕ ಪ್ರದರ್ಶನ

ದೆಹಲಿಯಲ್ಲಿನ ಆಂಧ್ರ ಭವನದಲ್ಲಿ ಆಂಧ್ರಪ್ರದೇಶ ಅವತರಣೋತ್ಸವದ ಅಂಗವಾಗಿ ನವಂಬರ್ 1 ರಿಂದ 7ರ ವರೆಗೆ ತಿ.ತಿ.ದೇ. ಪುಸ್ತಕ ಪ್ರದರ್ಶನವನ್ನು ಏರ್ಪಡಿಸಲಾಗಿದ್ದಿತು. ದೆಹಲಿಯ ನಾಗರಿಕರು ವಿಶೇಷ ಸಂಖ್ಯೆಯಲ್ಲಿ ಪುಸ್ತಕ ಪ್ರದರ್ಶನದಲ್ಲಿ ಭಾಗವಹಿಸಿ ತಿ.ತಿ.ದೇ. ಧಾರ್ಮಿಕ ಕೃತಿಗಳನ್ನು ಕೊಂಡರು. ಶ್ರೀನಿವಾಸ ಪದ್ಮಾವತಿಯವರ ಚಿತ್ರವಿರುವ ಚಿನ್ನ ಬೆಳ್ಳಿ ಪದಕಗಳು, ಬ್ರಹ್ಮೋತ್ಸವ ಮೊದಲಾದ ವೀಡಿಯೋ ಕ್ಯಾಸೆಟ್‌ಗಳೂ, ಹರಿದಾಸರ ಅನ್ನಮಾಚಾರ್ಯರ ಕೀರ್ತನೆಗಳ ಧ್ವನಿಸುರುಳಿಗಳೂ ಮಾರಾಟವಾದವು. ಪದಕಗಳ ಮಾರಾಟದ ಆದಾಯ ರೂ. 36,000 ಆಗಿದ್ದರೆ, ಪುಸ್ತಕಗಳ ಮಾರಾಟ ರಿಯಾಯಿತಿದರದಲ್ಲಿ 16,000 ರೂಗಳು ಆಗಿದ್ದಿತು.




# ವಾಚಕರಲ್ಲಿ.....

ಏರುತ್ತಿರುವ ಎಲ್ಲ ರೀತಿಯ ವಸ್ತುಗಳ ಬೆಲೆಗಳ ನಡುವೆ "ಸಪ್ತಗಿರಿ"ಯ ಉತ್ಪಾದನಾ ವೆಚ್ಚವೂ ಏರುತ್ತಿದೆಯಾಗಿ, ತಿ.ತಿ.ದೇ. ಧರ್ಮಕರ್ತರ ಮಂಡಳಿಯ ನಿರ್ಣಯದ ಪ್ರಕಾರ ಏಪ್ರಿಲ್ 1996 ರಿಂದ ಸಪ್ತಗಿರಿಯ ಬೆಲೆಯನ್ನು ನಾಲ್ಕು ರೂಪಾಯಿಗಳಿಗೆ ಏರಿಸಲು ತೀರ್ಮಾನಿಸಲಾಗಿದೆ.

1996 ಏಪ್ರಿಲ್ ತಿಂಗಳಿನಿಂದ ವಾರ್ಷಿಕ ಚಂದಾ ರೂ. 48/- ಆಗಿರುತ್ತದೆ. ವಾರ್ಷಿಕ ಚಂದಾಹಣ ತುಂಬುವವರು ಈ ಹೊಸ ಬೆಲೆಯನ್ನು ಗಮನಿಸಿ ತುಂಬಬೇಕೆಂದು ವಿನಂತಿ.

ಈಗಾಗಲೇ ಚಂದಾದಾರರಾಗಿರುವ ಸದಸ್ಯರ ಉಳಿಕೆ ಹಣವನ್ನು ಹೊಸಬೆಲೆಗೆ ತಕ್ಕಂತೆ ಹೊಂದಿಸಲಾಗುವುದಾಗಿ, ಅವರುಗಳು ತಮ್ಮ ಚಂದಾ ಅವಧಿಯನ್ನು ಸರಿನೋಡಿಕೊಂಡು ಪುನರುದ್ಧರಿಸಬೇಕೆಂದು ವಿನಂತಿ.

ಏಜಂಟರುಗಳು ಏಪ್ರಿಲ್ 1996 ರಿಂದ ತಮ್ಮ ಠೇವಣಿಯನ್ನು ಪ್ರತಿಗಳಿಗೆ ತಕ್ಕಂತೆ ಹೆಚ್ಚಿಸಬೇಕಾಗಿ ವಿನಂತಿ.

---

## ಸಪ್ತಗಿರಿ

**ಬಿಡಿಪ್ರತಿ - ರೂ. 4/-** **ವಾರ್ಷಿಕ ಚಂದಾ - ರೂ. 48/-**

(1996 ಏಪ್ರಿಲ್ ಸಂಚಿಕೆಯಿಂದ)

---

ಓದುಗರು, ಏಜಂಟರು ಹೊಸ ಬೆಲೆಗೆ ಹೊಂದಿಕೊಂಡು ಸಹಕರಿಸಬೇಕಾಗಿ ವಿನಂತಿ.

ಸಂಪಾದಕರು,
ಸಪ್ತಗಿರಿ.

Published on behalf of T. T. Devasthanams by N. S. Ramamurthy, M.A., Editor and Printed at T.T.D. Press by P. Mohan Rao, Manager, T.T.D. Press, Tirupati - 517 507

